# ಹಾಸಾ

ತಿಂಗಳ ಪತ್ರಿಕೆ

ನವೆಂಬರ್ : 1999

- ಮಹಿಳಾ ಚಳುವಳಿ, ವಿಚಾರಧಾರೆಗಳು, ಗೊಂದಲಗಳು
- ಸ್ತ್ರೀವಾದಿ ಚಳುವಳಿ ಸಧ್ಯದ ನಿಲುವುಗಳು
- 'ಚಹರೆ' ಪುಸ್ತಕ ಬಿಡುಗಡೆ ಕುರಿತು
- ಚರಣ್‌ಶಾಳ ಸಾವಿನ ಸುತ್ತ
- ಧಾರ್ಮಿಕ ಆತ್ಮಹತ್ಯೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 14 ಸಂಚಿಕೆ : 10

ನವೆಂಬರ್ : 1999



**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.

ಚಂಪಾವತಿ ಎಚ್. ಎಸ್., ಸರಸ್ವತಿ ದು.

ಸವಿತ ಎ., ಗೀತಾ

ಬಿ. ಎನ್. ಮಧುಮತಿ, ಬಿ. ಎನ್. ಶಾರದ

ಹೆಚ್. ಎಸ್. ಪುಷ್ಪ

**ಸಲಹೆ - ಸಹಕಾರ :**

ಇಳಾ ವಿಜಯಾ

**ಸಹ ಸಂಪಾದಕರು :**

ವನಜಾ ವೆಂ.

ನೀಲಾಂಜನ



ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ......




ಮಾನಸ ಪ್ರತಿಗಳಿಗಾಗಿ

# ಮೈಸೂರು

*ಮೈಸೂರಿನಲ್ಲಿರುವ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ*

**ವೆಂ. ವನಜ**

ಎಲ್. 3, ಏಳನೇ ತಿರುವು, ವಿ.ವಿ. ವಸತಿ ಗೃಹ

ಮಾನಸ ಗಂಗೋತ್ರಿ, ಮೈಸೂರು - 570 006



ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಮಕ್ಕಳ ದಿನಾಚರಣೆ ಬಂತು. ಎಲ್ಲೆಡೆ ಸಮಾರಂಭಗಳು ಜರುಗಿ ಮಕ್ಕಳ ಭವಿಷ್ಯ ಕುರಿತು ಆಶ್ವಾಸನೆಗಳು ಹರಿದವು. ಆಶ್ವಾಸನೆಗಳು ಜಾರಿಗೊಳ್ಳಲು ಎಷ್ಟು ಕಾಲವಾಗಬೇಕೋ ಅಥವಾ ನಿಜಕ್ಕೂ ಜಾರಿಗೊಳ್ಳುತ್ತವೋ ನೋಡಬೇಕು.

ನೆಹರು ಅವರು ತಮ್ಮ ಹುಟ್ಟಿದ ಹಬ್ಬವನ್ನು ಮಕ್ಕಳ ದಿನಾಚರಣೆಯನ್ನಾಗಿ ಆಚರಿಸಬೇಕೆಂದು ಹೇಳದಿದ್ದರೆ ಮಕ್ಕಳ ದಿನಾಚರಣೆಯೊಂದು ಇರುತ್ತಿತ್ತೆ ಗೊತ್ತಿಲ್ಲ. ಮಕ್ಕಳ ಶಿಕ್ಷಣ, ಆರೋಗ್ಯ ಕುರಿತ ಅಂಕಿ ಅಂಶಗಳು ಗಾಭರಿ ಹುಟ್ಟಿಸುತ್ತವೆ. ಪ್ರೈಮರಿ ಶಾಲೆಯಲ್ಲಿರಬೇಕಾಗಿದ್ದ (6ರಿಂದ 10 ವಯಸ್ಸಿನವರು) 20 ಮಿಲಿಯನ್ ಮಕ್ಕಳು ಶಾಲೆಗೆ ಹೋಗುವುದಿಲ್ಲ. 13 ವಯಸ್ಸಿನ 7ನೇ ತರಗತಿಗೆ ಹೋಗುವ 2,500 ವಿದ್ಯಾರ್ಥಿಗಳನ್ನು ಕುರಿತು ನಡೆಸಲಾದ ಅಧ್ಯಯನವೊಂದರಲ್ಲಿ ಕನ್ನಡದ 20 ಸರಳ ಶಬ್ದಗಳನ್ನು ಬರೆಯಬಲ್ಲವರಿದ್ದ ಸಂಖ್ಯೆ ಶೇ. 10ಕ್ಕಿಂತ ಕಡಿಮೆ! ಪರಿಸರದಲ್ಲಿ ಜೀವ, ನಿರ್ಜೀವ ವಸ್ತುಗಳನ್ನು ಗುರುತಿಸಬಲ್ಲವರಿದ್ದ ಸಂಖ್ಯೆ ಶೇ. 5ಕ್ಕಿಂತ ಕಡಿಮೆ.

ಗ್ರಾಮೀಣ ಪರಿಸರದಲ್ಲಿ ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ಶಾಲೆ ಬಿಡುವ ಸಂದರ್ಭವೇ ಹೆಚ್ಚು. ದೂರದ ಶಾಲೆ, ಮನೆಗೆಲಸ, ಚಿಕ್ಕ ಮಕ್ಕಳನ್ನು ಸಂಬಾಳಿಸುವುದು, ಹೆಣ್ಣು ಮಕ್ಕಳ ಮೇಲೆ ನಡೆಯುವ ಲೈಂಗಿಕ ಹಲ್ಲೆ, ಮುಂತಾದ ಕಾರಣದಿಂದ ಹೆಣ್ಣು ಮಕ್ಕಳು ಪ್ರಾಥಮಿಕ ಶಿಕ್ಷಣದಿಂದ ವಂಚಿತರಾಗುತ್ತಾರೆ. ಸ್ಥಿತಿ ಹೀಗಿರುವಾಗ Internet ಮೂಲಕ ಎಲ್ಲರಿಗೂ ಶಿಕ್ಷಣ ಸಾಧ್ಯವಾಗುತ್ತದೆನ್ನುವ ಮಾತು ಮೂರ್ಖತನದ್ದು. Internetನಲ್ಲಿ ಇಂಗ್ಲೀಷ್ ಭಾಷೆಯೇ ಪ್ರಧಾನವಾಗಿದೆ. ನಮ್ಮ ದೇಶದಲ್ಲಿ ಇಂಗ್ಲೀಷ್ ಭಾಷೆ ಬಲ್ಲವರ ಸಂಖ್ಯೆ ಶೇ. 20ಕ್ಕಿಂತ ಕಡಿಮೆ ಇರುವಂತಹ ಸ್ಥಿತಿಯಲ್ಲಿ ಆಧುನಿಕ ತಂತ್ರಜ್ಞಾನ ಎಷ್ಟು ಉಪಯುಕ್ತತೆ ಎನ್ನುವುದನ್ನು ಯಾರಾದರೂ ಊಹಿಸಿಕೊಳ್ಳಬಹುದು.

ಕನಿಷ್ಠ ಅಗತ್ಯವಾದ ಶುದ್ಧ ನೀರಿನ ವ್ಯವಸ್ಥೆಯೂ ಇಲ್ಲದಿರುವಾಗ ಮಕ್ಕಳ ಆರೋಗ್ಯದ ಸ್ಥಿತಿಯನ್ನು ಯಾರೂ ಊಹಿಸಬಹುದು.

ಮೂಲಭೂತ ಅಗತ್ಯಗಳ ಬಗ್ಗೆ ತಲೆಯೇ ಕೆಡಿಸಿಕೊಳ್ಳದ ಸರ್ಕಾರ ಪಠ್ಯ ಪುಸ್ತಕಗಳನ್ನು ಕೇಸರಿ ಹಾಲು ಮಾಡಲು ಹೊರಟಿರುವುದು ಖಂಡನಾರ್ಹ.

●

ಅನೇಕ ತಪ್ಪುಗಳನ್ನು ಮಾಡಿದ ಪಾಪಪ್ರಜ್ಞೆ ನಮ್ಮನ್ನು ಕಾಡುತ್ತಿದೆ.
ನಮ್ಮ ಘೋರ ಅಪರಾಧವೆಂದರೆ ಜೀವ ಚಿಲುಮೆಯಾದ ಮಕ್ಕಳನ್ನು ಕಡೆಗಣಿಸಿರುವುದು.
ನಮ್ಮ ಎಷ್ಟೋ ಬಯಕೆಗಳು ಈಡೇರಲು ಕಾಯಬಹುದು.
ಮಕ್ಕಳು ಕಾಯಲಾಗುವುದಲ್ಲ,
ಅವರ ಎಲುಬುಗಳು ರೂಪುಗೊಳ್ಳುವ ಸಮಯವಿದು.
ನೆತ್ತರು ತಯಾರಾಗಿ, ಇಂದ್ರಿಯಗಳು ಬೆಳವಣಿಗೆಯಾಗುತ್ತಿವೆ.
ಅವರಿಗೆ 'ನಾಳೆ' ಎಂಬ ಉತ್ತರ ನೀಡಲಾಗದು,
ಅವರ ಹೆಸರು 'ಇಂದು'.

*ಗೆಬ್ರಿಯಲ್ ಮಿಸ್ಟ್ರೆಲ್*

# “ಮಹಿಳಾ ಚಳುವಳಿ, ವಿಚಾರಧಾರೆಗಳು, ಗೊಂದಲಗಳು”

*- ಸಹೇಲಿ*

70ರ ದಶಕದ ಸ್ವಾಯತ್ತ ಮಹಿಳಾ ಚಳುವಳಿಯ ಒತ್ತಡದಿಂದಾಗಿ ಇಂದು ಹಲವಾರು ಬದಲಾವಣೆಗಳನ್ನು ಕಾಣಬಹುದು. ಸಂಘಟನೆಗಳು ತೆಗೆದುಕೊಂಡ ಮಹಿಳಾ ಸಮಸ್ಯೆಗಳು ಬದಲಾದಂತೆ, ಪ್ರತಿಭಟನಾ ಮಾದರಿಗಳಲ್ಲಿ ಹಾಗೂ ತಂತ್ರಗಳಲ್ಲಿಯು ಬದಲಾವಣೆ ಕಂಡುಬರುತ್ತಿದೆ. 80ರ ಹಾಗೂ 90ರ ದಶಕದಲ್ಲಿ ಎಡಪಂಥೀಯ ಪಕ್ಷಗಳು, ಮಾವೋವಾದಿ ಗುಂಪುಗಳು, ಹಾಗೂ ಕಾರ್ಮಿಕ ಸಂಘಟನೆಗಳು ಮಹಿಳೆಯರ ಸಮಸ್ಯೆಗಳನ್ನು ದೊಡ್ಡಮಟ್ಟದಲ್ಲಿಯೇ ತೆಗೆದುಕೊಂಡು ಹೋರಾಡುತ್ತಿವೆ. ಅದೇ ರೀತಿಯಲ್ಲಿ ಮಹಿಳಾ ಸಮಸ್ಯೆಗಳೊಂದಿಗೆ ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಹುಟ್ಟಿರುವುದನ್ನು ಕಾಣಬಹುದು. ಮಹಿಳಾ ಚಳುವಳಿಯ ಒತ್ತಡದಿಂದಾಗಿ ಸರ್ಕಾರ ಸಹ ಮಹಿಳೆಯರಿಗಾಗಿ ವಿಶೇಷ ಕಾರ್ಯಕ್ರಮಗಳನ್ನು, ಯೋಜನೆಗಳನ್ನು, ಮಹಿಳೆಯರ ಪರವಾಗಿರುವ ಕಾನೂನುಗಳನ್ನು ರೂಪಿಸಿದೆ.

ಆದರೆ ಮಹಿಳೆಯರ ಪರವಾಗಿರುವ ಕಾನೂನುಗಳು ಹಾಗೂ ಯೋಜನೆಗಳು ಹಾಗೂ ಪಾಲನೆಗಳು ಎಷ್ಟರಮಟ್ಟಿಗೆ ಮಹಿಳೆಯರ ಜೀವನದಲ್ಲಿ ಮಾರ್ಪಾಡುಗಳನ್ನು ತಂದಿದೆ ಎಂಬುದು ಯೋಚಿಸಬೇಕಾದ ಪ್ರಶ್ನೆಯಾಗಿದೆ. ಪ್ರಬಲವಾದ ಮಹಿಳಾ ಚಳುವಳಿಯ ಜೊತೆಜೊತೆಗೆ ಪಕ್ಷಪಾತ ಧೋರಣೆಯು ಮುಂದುವರಿಯುತ್ತಲೇ ಇದೆ. ಗಾಬರಿ ಹುಟ್ಟಿಸುವ ಇನ್ನೊಂದು ಸಂಗತಿಯೆಂದರೆ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಹೆಚ್ಚಳ. ಮಹಿಳಾ ಚಳುವಳಿ ಎತ್ತಿದ ಬೇಡಿಕೆಯನ್ನು ಹಾಗೂ ಮಹಿಳಾ ಚಳುವಳಿಯ ಪರಿಭಾಷೆಯನ್ನು ರಾಜ್ಯ ಹಾಗೂ ಇತರ ಶಕ್ತಿಗಳು ಸುಲಭವಾಗಿ ಇಂದು ತನ್ನ ವ್ಯಾಪ್ತಿಗೆ ಸೇರಿಸಿಕೊಂಡಿದೆ.

ಇದು ಮಹಿಳಾ ಚಳುವಳಿಯ ಮೇಲೆ ನಕಾರಾತ್ಮಕ ಪರಿಣಾಮವನ್ನು ಬೀರುತ್ತಿದೆ. ಕೋಮುವಾದಿ ಶಕ್ತಿಗಳ ಬೆಳವಣಿಗೆ ಹಾಗೂ ಮುಕ್ತ ಆರ್ಥಿಕ ನೀತಿಯಿಂದಾಗಿ ಸಮಸ್ಯೆ ಮತ್ತಷ್ಟು ಜಟಿಲವಾಗಿದೆ.

ಜನವಾದಿ ಮಹಿಳಾ ಸಮಿತಿಯ ಇಂದು ಅಗ್ನಿಹೋತ್ರಿ ಭಾರತದ ಮಹಿಳಾ ಚಳುವಳಿ ಹಾಗೂ ಅಂತರರಾಷ್ಟ್ರೀಯ ಮಹಿಳಾ ಚಳುವಳಿಯ ನಡುವೆ ಇರುವ ಸಂಬಂಧದ ಅಗತ್ಯವನ್ನು ಕುರಿತು ಮಾತನಾಡಿದರು.

ಭಾರತದಲ್ಲಿನ ಮಹಿಳಾ ಸಮಸ್ಯೆಗೆ ಒಂದು ತಾತ್ವಿಕ ನೋಟವನ್ನು ಬೆಳೆಸಲು ಮಹಿಳಾ ಚಳುವಳಿ ಹಾಗೂ ಮಹಿಳಾ ಅಧ್ಯಯನ ಕಾರಣವಾಗಿದೆ. ಅಂತರರಾಷ್ಟ್ರೀಯ ವಿಭಾಗಗಳಾದ ಯುನೈಟೆಡ್ ನೇಷನ್ ಹಾಗೂ ಯೂನಿಸೆಫ್ ಮುಂತಾದವುಗಳನ್ನು ಅವುಗಳ ಮಿತಿಗಳೊಂದಿಗೆ ಅರ್ಥಮಾಡಿಕೊಳ್ಳಬೇಕಾಗಿದೆ. ಭಾರತದ ಮಹಿಳಾ ಚಳುವಳಿ ಹಾಗೂ ಹಣಕಾಸಿನ ನೆರವು ನೀಡುವ ಸಂಸ್ಥೆಗಳನ್ನು ಕುರಿತು ನಡೆಸುವ ಚರ್ಚೆಗಳು ಸಾಮಾನ್ಯವಾಗಿ ಏಕಪಕ್ಷೀಯವಾಗಿರುತ್ತದೆಯಲ್ಲದೆ, ಅಂತಹ ಸಂಸ್ಥೆಗಳ ಪರವಾದ ನಿಲುವುಗಳನ್ನು ತೆಗೆದುಕೊಳ್ಳಲಾಗುತ್ತದೆ. ಅಭಿವೃದ್ಧಿ ಹೊಂದಿದ ದೇಶಗಳಿಂದ ಬರುವ ವಿದೇಶಿ ಹಣದಿಂದಾಗಿ ಮೊದಲ ಜಗತ್ತಿನ ದೇಶಗಳೆಲ್ಲಾ ಒಗ್ಗೂಡುವಂತಾಗಿ, ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ಉಂಟಾಗುವ ಸಂಕೀರ್ಣ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ವಿಫಲವಾಗಿದೆ. ನಮ್ಮ ಅನುಭವಗಳನ್ನು ಹಾಗೂ ನಮ್ಮ ಸಮಸ್ಯೆಗಳನ್ನು ನಮ್ಮದೇ ಆದ ದೃಷ್ಟಿಕೋನದಿಂದ ಚಿತ್ರಿತವಾಗಬೇಕಾಗುತ್ತದೆ. ಸ್ತ್ರೀವಾದವು ನಮ್ಮ ಹೋರಾಟಗಳನ್ನು ಪುನರ್ ವ್ಯಾಖ್ಯಾನಗೊಳಿಸಿವೆ. ಸ್ತ್ರೀವಾದದ ಕನ್ನಡಿಯಲ್ಲಿ ಹಾದುಬರುವ ವಿಶ್ಲೇಷಣೆಯನ್ನು ನಾವು ಜನಪ್ರಿಯಗೊಳಿಸುವುದು ಅತ್ಯಗತ್ಯವಾಗಿದೆ. ಮೂರನೇ ಜಗತ್ತಿನ ಹೋರಾಟಗಳೊಂದಿಗೆ ನಮ್ಮ ಹೋರಾಟಗಳನ್ನು ತಳಕುಹಾಕುವುದು ಅಗತ್ಯವಾಗಿದೆ.

*ಕಳೆದ ವರ್ಷ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ದೆಹಲಿಯ ಸ್ವಾಯತ್ತ ಮಹಿಳಾ ಸಂಘಟನೆಯಾದ ಸಹೇಲಿ “ಮಹಿಳಾ ಚಳುವಳಿ, ವಿಚಾರಧಾರೆಗಳು ಹಾಗೂ ಗೊಂದಲಗಳು” ಕುರಿತು ಏರ್ಪಡಿಸಿದ ವಿಚಾರಗೋಷ್ಠಿಯಲ್ಲಿ ಮಹಿಳಾ ಚಳುವಳಿಯ ಇತಿಹಾಸವನ್ನು, ಚಳುವಳಿಯ ಗೊಂದಲಗಳನ್ನು ಪ್ರಾಮಾಣಿಕವಾಗಿ ಮುಕ್ತವಾಗಿ ಚರ್ಚಿಸಲಾಯಿತು. ಈ ಚರ್ಚೆ ಚಳುವಳಿಯ ಚಲನಶೀಲತೆ ಹಾಗೂ ಕ್ರಿಯಾಶೀಲತೆಯ ಪ್ರತಿಬಿಂಬವಾದುದರಿಂದ ಕನ್ನಡಕ್ಕೆ ಅನುವಾದಿಸಲಾಗಿದೆ.*

ನಮ್ಮ ಪಾದಗಳಡಿಯಲ್ಲಿನ ಮಣ್ಣು ಜಾರುತ್ತಿದೆಯೆನಿಸಿದರೂ, ನಾವು ಜನರೊಂದಿಗೆ ನೇರವಾಗಿ ಕೆಲಸ ಮಾಡುವುದು ಅತ್ಯಗತ್ಯವಾಗಿದೆ. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಬದಲಾವಣೆಗಾಗಿ ಎತ್ತುವ ಪ್ರಶ್ನೆಗಳನ್ನು ನಮ್ಮದೇ ಆದ ನೆಲೆಯಲ್ಲಿ ವಿಶಾಲವಾದ ಒಂದು ಚೌಕಟ್ಟಿನಲ್ಲಿ ಕೇಳಬೇಕಾಗುತ್ತದೆ.

ಬೆಳೆಯುತ್ತಿರುವ ಕೋಮುವಾದ ಹಾಗೂ ಪುರೋಗಾಮಿ ಶಕ್ತಿಗಳ ಇಂದಿನ ಸಂದರ್ಭದಲ್ಲಿ ಮಹಿಳಾ ಚಳುವಳಿಯಲ್ಲಿನ ಚರ್ಚೆಯು ಭಿನ್ನವಾಗಿರಬೇಕಾಗುತ್ತದೆ. ನಮ್ಮ ನಡುವಿರುವ ಭಿನ್ನಾಭಿಪ್ರಾಯಗಳನ್ನು ಒತ್ತಿಹೇಳಬೇಕಾಗುತ್ತದೆ. ಉದಾ. ಬಿ.ಜೆ.ಪಿ. ಹಾಗೂ ಮಹಿಳಾ ಚಳುವಳಿ, ಸಮಾನ ನಾಗರೀಕ ಸಂಹಿತೆಯನ್ನು ಒತ್ತಿ ಹೇಳುತ್ತವೆ. ನಮ್ಮ ವ್ಯಾಖ್ಯಾನ ಹೇಗೆ ಭಿನ್ನವಾಗಿದೆಯೆಂಬುದನ್ನು ಒತ್ತಿ ಹೇಳಬೇಕಾಗುತ್ತದೆ. ವರ್ಗ, ಪ್ರಾದೇಶಿಕತೆ, ನಗರ ಸಂಸ್ಕೃತಿ ಹಾಗೂ ಆದಿವಾಸಿ ಸಂಸ್ಕೃತಿಯ ನಡುವಿನ ವಿವಿಧ ಸ್ವರೂಪಗಳನ್ನು ಕುರಿತು ಮಾತನಾಡಬೇಕಾಗಿದೆ. ಈ ಸಮಸ್ಯೆಗಳ ಸಂಕೀರ್ಣತೆಯನ್ನು ಅರ್ಥಮಾಡಿಕೊಂಡು ಪ್ರತಿಕ್ರಿಯಿಸಬೇಕಾಗಿದೆ. ಮಹಿಳಾ ಚಳುವಳಿಯ ವಿವಿಧ ನಿಲುವುಗಳನ್ನು, ವ್ಯತ್ಯಾಸಗಳನ್ನು ಚಳುವಳಿಯು ಸಮರ್ಥವಾಗಿ ವರ್ಗ ಹಾಗೂ ವಿವಿಧ ಕೋಮುಗಳ ಮೇಲೆ ಪಿತೃ ಪ್ರಧಾನ ಸಂಸ್ಕೃತಿಯ ಬೀರುವ ಪರಿಣಾಮ ಒಂದೇ ತೆರನಾಗಿರದೇ ಭಿನ್ನವಾಗಿರುತ್ತದೆ. ಮಹಿಳೆಯರ ಐಕ್ಯತೆಯನ್ನು ಕೇವಲ ಪಿತೃ ಪ್ರಧಾನತೆಯ ಹಿನ್ನೆಲೆಯಲ್ಲಿ ಸಾಧಿಸಲು ಸಾಧ್ಯವಿಲ್ಲ. ಮಹಿಳಾ ಚಳುವಳಿಯಲ್ಲಿನ ವಿವಿಧ ವಿಚಾರಧಾರೆಗಳ ನಡುವಿರುವ ಭಿನ್ನತೆಗಳನ್ನು ಅರ್ಥಮಾಡಿಕೊಳ್ಳದಿದ್ದರೆ, ನಮ್ಮ ಸಾಮಾನ್ಯ ಹೋರಾಟವನ್ನು ದುರ್ಬಲಗೊಳಿಸಿದಂತಾಗುತ್ತದೆ.

ಎ.ಐ.ಟಿ.ಯು.ಸಿ. ಹಾಗೂ ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್‌ನ ಕಾರ್ಯದರ್ಶಿಯಾದ ಅಮರಜಿತ್ ಕೌರ್‌ರವರು ಹೆಣ್ಣುಮಕ್ಕಳನ್ನು ತಾರತಮ್ಯ ಧೋರಣೆಯಿಂದ ಬೆಳೆಸುವ ಬಗ್ಗೆ ಮಾತನಾಡುತ್ತಾ, ತಾವು ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗ ಹೆಣ್ಣು ಮಕ್ಕಳು ಹಾಗೂ ಗಂಡು ಮಕ್ಕಳು, ಪಡೆಯುತ್ತಿದ್ದ ಭಿನ್ನವಾದ ಪ್ರಕ್ರಿಯೆಗಳನ್ನು ವಿವರಿಸುತ್ತಾ, ಮಹಿಳಾ ಚಳುವಳಿಯ ಇತಿಹಾಸವನ್ನು ಗುರುತಿಸುತ್ತಾ, ಈ ಎರಡೂವರೆ ದಶಕದಲ್ಲಿ ಹಲವಾರು ಬದಲಾವಣೆಗಳು ಕಂಡುಬಂದಿರುವುದನ್ನು ಹಾಗೂ ಸಮಸ್ಯೆಗಳು ಹೆಚ್ಚು ಸಂಕೀರ್ಣಗೊಳ್ಳುತ್ತಿರುವುದನ್ನು ಕುರಿತು ಮಾತನಾಡಿದರು.

ಉತ್ಪಾದನೆಯ ಪ್ರಕ್ರಿಯೆಯಿಂದ ಸ್ತ್ರೀಯರನ್ನು ದೂರವಿಟ್ಟಿರುವ ಕಾರಣ ಸ್ತ್ರೀಯರು ಸಮಾಜದಲ್ಲಿ ಎರಡನೆ ದರ್ಜೆಯ ಸ್ಥಾನಮಾನವನ್ನು ಹೊಂದಬೇಕಾಯಿತೆಂದ ಅವರು ಈ ಕಾರಣದಿಂದಲೇ ಸ್ತ್ರೀಯರು ಪುರುಷನ ಖಾಸಗೀ ಆಸ್ತಿಯಾದರು ಎಂದರು. ಆರ್ಥಿಕ ಚಟುವಟಿಕೆಯಲ್ಲಿ ಸ್ತ್ರೀಯರು ಭಾಗವಹಿಸುವ ಹಕ್ಕಿಗಾಗಿ ನಡೆಸುವ ಹೋರಾಟವೇ ನಿಜವಾದ ಹೋರಾಟ. ಸ್ತ್ರೀಯರ ಹಿತಾಸಕ್ತಿಯನ್ನು ರಕ್ಷಿಸುವುದಕ್ಕಾಗಿ ವ್ಯವಸಾಯಕ್ಕೆ ಸಂಬಂಧಪಟ್ಟ ಮಸೂದೆಗಾಗಿ ಹೋರಾಡಬೇಕಾಗಿದೆ. ಸ್ತ್ರೀಯರನ್ನು ಮನೆಗೆಲಸದ ಕಾರ್ಮಿಕರೆಂದು ಪರಿಗಣಿಸಿ, ವಾಷಿಂಗ್ ಮಿಷಿನ್‌ನನ್ನು ಕೊಡುತ್ತಿರುವ ಇಂದಿನ ಆರ್ಥಿಕ ನೀತಿಯನ್ನು ಟೀಕಿಸಿದರು. ಎಲ್ಲಾ ಹೋರಾಟಗಳ ಚಳುವಳಿಗಳ ಬೆನ್ನೆಲುಬಾದ ಜನಸಾಮಾನ್ಯ ಮಹಿಳೆಯರು ನಮ್ಮ ಎಲ್ಲಾ ಹೋರಾಟಗಳ ಕೇಂದ್ರ ಬಿಂದುವಾಗಬೇಕಾಗಿದೆ. ಮಹಿಳೆಯರ ಸಮಸ್ಯೆಗಳಿಗೆ ಕೋಮುವಾದಿ ಬಣ್ಣ ಬಳಿದು ವಿಕೃತಗೊಳಿಸುತ್ತಾ ಮಹಿಳೆಯನ್ನು, ದಾರಿ ತಪ್ಪಿಸುತ್ತಿರುವ ಶಕ್ತಿಗಳನ್ನು ಅವರು ಟೀಕಿಸಿದರು.

33% ಮೀಸಲಾತಿಯ ಬಗ್ಗೆ ಅವರು ಮಾತನಾಡುತ್ತಾ, ಇದು ಮಹಿಳೆಯರನ್ನು ಸಶಕ್ತಗೊಳಿಸುವಲ್ಲಿ ಒಂದು ಹೆಜ್ಜೆಯಾಗಿದೆ. ಆದರೆ ಆಯ್ಕೆಯಾದ ಮಹಿಳೆಯರಿಗೆ ಬಲ ದೊರೆಯುವುದು ವಿದ್ಯಾಭ್ಯಾಸದಿಂದ. ಆಯ್ಕೆಯಾದ ಮಹಿಳೆಯರು ಮಹಿಳೆಯರಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಕುರಿತು ಮಾತನಾಡಬೇಕು. ಇಲ್ಲದಿದ್ದರೆ - ಮಹಿಳಾ ಪ್ರತಿನಿಧಿಗಳನ್ನು ಆಯ್ಕೆ ಮಾಡಿರುವುದು ಅರ್ಥಹೀನವಾಗುತ್ತದೆ.

ಆಲ್ ಇಂಡಿಯಾ ಪ್ರೋಗ್ರೆಸಿವ್ ವುಮೆನ್ಸ್ ಅಸೋಸಿಯೇಷನ್‌ನ ಕುಮುದಿನಿ ಪತಿ ಅವರು ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿ ರಾಜಕೀಯ ಕುರಿತು ಮಾತನಾಡುತ್ತಾ, ಗೂಂಡಾ ರಾಜಕೀಯದಿಂದಾಗಿ ಮಹಿಳಾ ಅಭ್ಯರ್ಥಿಗಳನ್ನು ಹೆದರಿಸುತ್ತಿದ್ದುದರಿಂದ ಮಹಿಳೆಯರು ರಾಜಕೀಯಕ್ಕೆ ಬರಲು ಹಿಂಜರಿಯುತ್ತಿದ್ದರು. ಮಹಿಳಾ ಅಭ್ಯರ್ಥಿಗಳ ಫೋಟೋಗಳನ್ನು ವಿಕೃತಗೊಳಿಸುವುದು, ಗೋಡೆಗಳ ಮೇಲೆ ಅಸಹ್ಯ ಬರಹಗಳನ್ನು ಬರೆಯುವುದು, ಮುಂತಾದವುಗಳಿಂದಾಗಿ ವಿದ್ಯಾರ್ಥಿಯರು ಸಕ್ರಿಯವಾಗಿ ರಾಜಕೀಯದಲ್ಲಿ ಭಾಗವಹಿಸಲು ಹಿಂಜರಿಯುತ್ತಿದ್ದರು. ಹೋರಾಟಗಳಲ್ಲಿ ಪುರುಷರಷ್ಟೇ ಸಮವಾಗಿ ಭಾಗವಹಿಸುವುದರಲ್ಲಿ ಜೈಲು, ಕೋರ್ಟು ಕೇಸುಗಳು, ಮುಂತಾದ ಸಮಸ್ಯೆಗಳು ಎದುರಾಗುತ್ತಿದ್ದವು. ಆದರೂ ಕ್ರಮೇಣ ಮಹಿಳೆಯರು ವಿಶ್ವವಿದ್ಯಾನಿಲಯದ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದು, ಕ್ರಮೇಣ, ಹಿಂಸೆ, ಲೈಂಗಿಕ

ಕಿರುಕುಳ, ಮಹಿಳೆಯರ ಸ್ಥಾನಮಾನ ಕುರಿತು ಹೋರಾಟದಲ್ಲಿ ತೊಡಗಿದರು.

1994ರಲ್ಲಿ AIPWA ರಚನೆಯಾಯಿತು. ಇದು ಸ್ತ್ರೀವಾದ ಹಾಗೂ ಎಡಪಂಥೀಯ ವಿಚಾರಧಾರೆಯಿಂದ ಪ್ರೇರಣೆಯನ್ನು ಪಡೆಯಿತು. ಸ್ವಾಯತ್ತ ಮಹಿಳಾ ಸಂಘಟನೆ ಹಾಗೂ ಎಡಪಂಥ ವಿಚಾರಧಾರೆಗಳ ನಡುವೆ ಸಂವಾದ ನಡೆಯಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಾ, ಇವು ಒಂದನ್ನೊಂದು ಏಕಸಿದ್ಧಾಂತವಾದಿ ಎಂದು ಆರೋಪಿಸುವುದು ಸರಿಯೆನಿಸುವುದಿಲ್ಲ. ಪರಸ್ಪರ ಟೀಕೆ ಈ ಎರಡು ಗುಂಪುಗಳ ನಡುವಿನ ಸಂವಾದವನ್ನು ತಟಸ್ಥಗೊಳಿಸಿದೆ. ಇದನ್ನು ಮೀರಿ ಮುಂದುವರಿಯುವ ಅಗತ್ಯವಿದೆ. "ಬದಲಾವಣೆಯಾಗಿದೆ" ಎಂದು ಹಣೆಪಟ್ಟಿ ಹಚ್ಚಿ ವರ್ಗೀಕರಿಸುವುದರ ಬದಲಾಗಿ ಹೆಚ್ಚು ಮುಕ್ತವಾದ ಸಂವಾದ ಹಾಗೂ ಹೊಂದಾಣಿಕೆಯು ಆರೋಗ್ಯಕರ ಪ್ರಚೋದನೆಯನ್ನು ನೀಡುತ್ತದೆ.

ರಾಜ್ಯದ ವಿರುದ್ಧ ಹೋರಾಡುವುದರ ಆದ್ಯತೆಯ ಜೊತೆಗೆ ಎಲ್ಲಾ ಪ್ರಗತಿಪರ ಶಕ್ತಿಗಳ ನಡುವೆ ಹೊಂದಾಣಿಕೆ ಬೇಕಾಗಿದೆ. ಸ್ತ್ರೀ ಸಂಘಟನೆಯ ಜೊತೆಗೆ ಜನಸಾಮಾನ್ಯ ಮಹಿಳೆಯನ್ನು ತಲುಪುವುದು ಅತ್ಯಗತ್ಯವಾಗಿದೆ. ರಾಜ್ಯದೊಂದಿಗೆ ಹೋರಾಟ, ಒತ್ತಡ ಹಾಕುವುದು ಚಾಲನೆ ಮಾಡುವುದನ್ನು ಮುಂದುವರಿಸ ಬೇಕಾಗುತ್ತದೆ. ರಾಜ್ಯ ಅಥವಾ ವಿದೇಶಿ ನೆರವು ನೀಡುವ ಅಂತರ ರಾಷ್ಟ್ರೀಯ ಸಂಸ್ಥೆಗಳು ಕೋಆಪ್ಟ್ ಮಾಡಿಕೊಳ್ಳುವುದನ್ನು ತಪ್ಪಿಸಿ ಕೊಳ್ಳಬೇಕಾಗಿದೆ. CPI - ML ಈಗ ಭೂಗತವಾಗಿ ಕೆಲಸ ಮಾಡುತ್ತಿಲ್ಲ. ಆದರೆ ಪ್ರಜಾಪ್ರಭುತ್ವ ಮಾದರಿಯಲ್ಲಿ ಎಷ್ಟು ದೂರದವರೆಗೆ ನಡೆಯಬಹುದು - ಇದು ಮಹಿಳೆಯರ ಪ್ರಶ್ನೆಯ ಆಧಾರದ ಮೇಲೆ ರಚನೆಯಾಗಲು ಸಾಧ್ಯವೆ? ಬಿಹಾರದಲ್ಲಿ ನಡೆಯುತ್ತಿರುವ ನರಮೇಧದ ಬಗ್ಗೆ ಮಾತನಾಡುತ್ತಾ, ಇದು ಹಿಂಸೆಯ ಮತ್ತು ಅಹಿಂಸೆಯ ನಡುವಿನ ಪ್ರಶ್ನೆಯಲ್ಲ ಇದು ಜಾತಿ ತುಳಿತದ ಶೋಷಣೆಯಾಗಿದೆ.

ಎಲ್ಲಾ ಪ್ರಗತಿಪರ ಸಂಘಟನೆಗಳಿಗೂ 'ರಾಜ್ಯದ ದಬ್ಬಾಳಿಕೆ' ಒಂದು ಮುಖ್ಯವಾದ ಅಂಶವಾಗಿದೆ. ಪೊಲೀಸ್ ದೌರ್ಜನ್ಯ, ಅಸ್ಸಾಂ ಹಾಗೂ ಈಶಾನ್ಯ ರಾಜ್ಯಗಳಲ್ಲಿ ಸೈನ್ಯಾಡಳಿತ, ಇವು ಸ್ತ್ರೀಯರ ಮೇಲೆ ಆಳವಾದ ಪರಿಣಾಮವನ್ನು ಬೀರಿವೆ. ಈ ಉಲ್ಲಂಘನೆಗಳನ್ನು ವಿರೋಧಿಸುವುದು ನಮ್ಮ ದೀರ್ಘ ಅನುಭವದ ಭಾಗವಾಗಿದೆ. ನಾಳಿನ ಸವಾಲುಗಳನ್ನು ನಾವು ಸಮರ್ಥವಾಗಿ ಎದುರಿಸಬೇಕಾದರೆ ಮಾರ್ಕ್ಸ್‌ವಾದ ಹಾಗೂ ಸ್ತ್ರೀವಾದದ ನಡುವಿನ ಚರ್ಚೆಗಳನ್ನು ಮುಂದುವರಿಸಿಕೊಂಡು ಹೋಗಬೇಕಾಗಿದೆ. ಈ ಎರಡು ಸಿದ್ಧಾಂತಗಳಿಂದ ಪ್ರಸ್ತುತವಾದ ಹಾಗೂ ಕ್ರಿಯಾತ್ಮಕವಾದ ತಾತ್ವಿಕತೆಯನ್ನು ರೂಪಿಸಬೇಕಾಗಿದೆ.

ಚರ್ಚೆ ನಡೆದ ಸಂದರ್ಭದಲ್ಲಿ ದಲಿತರ ಪ್ರಶ್ನೆಯನ್ನು ಮುಖ್ಯವಾಗಿ ಎತ್ತಲಾಯಿತು. ವರ್ಗ ಪ್ರಶ್ನೆಯಡಿಯಲ್ಲಿ ಜಾತಿಯ ಪ್ರಶ್ನೆಯನ್ನು ಮರೆಮಾಡಲಾಗುತ್ತಿದೆ. ಹಾಗಾಗಿ, ಭಾರತದ ನೈಜ ಪ್ರಶ್ನೆಯಾದ ಜಾತಿ ಪ್ರಶ್ನೆಯನ್ನು ನಿರ್ಲಕ್ಷಿಸಲಾಗುತ್ತಿದೆ. ಬಹುಪಾಲು ದಲಿತರು ಬಡವರಾಗಿರುವುದು ನಿಜವಾದರೂ, ಜಾತಿ ಪ್ರಶ್ನೆ ಒಂದು ವಿಶಿಷ್ಟ ಪ್ರಶ್ನೆಯಾಗಿರುವುದರಿಂದ, ಅದಕ್ಕೆ ವಿಶಿಷ್ಟವಾಗಿಯೇ ಪ್ರತಿಕ್ರಿಯಿಸಬೇಕಾಗಿದೆ.

ಎಡಪಕ್ಷಗಳು ತಾತ್ವಿಕವಾಗಿ 'ಸಮಾನ ಅವಕಾಶ'ವನ್ನು ಒಪ್ಪಿಕೊಂಡಿದ್ದರೂ, ಪಕ್ಷದಲ್ಲಿ ಮೇಲುವರ್ಗ ಹಾಗೂ ಮೇಲುಜಾತಿಯ ಜನರೇ ಹೆಚ್ಚು ಪ್ರಬಲವಾಗಿದ್ದಾರೆ. ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ದಲಿತರ ಹಾಗೂ ಮಹಿಳೆಯರ ಭಾಗವಹಿಸುವಿಕೆಯ ಅಂಶವನ್ನು ತೆಗೆದುಕೊಂಡರೆ ಎಡಪಕ್ಷಗಳು ತಮ್ಮ ಹಾದಿಯಲ್ಲಿ ಇನ್ನು ಮುಂದೆ ಹೋಗಬೇಕಾಗಿದೆ. ಎಡಪಕ್ಷದ ಬಹಳಷ್ಟು ಮಹಿಳೆಯರು 33% ಮೀಸಲಾತಿಗೆ ಹೋರಾಡುತ್ತಿದ್ದರೂ, ತಮ್ಮ ಪಕ್ಷದ ಕೇಂದ್ರ ಸಮಿತಿಯಲ್ಲಿ ಹಾಗೂ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಅವಕಾಶ ಕೊಡುವುದನ್ನು ನಿರಾಕರಿಸಲಾಗುತ್ತಿದೆ. ಎಡಪಕ್ಷದ ಮಹಿಳೆಯರು ಈ ಅಂಶವನ್ನು ಒಪ್ಪಿಕೊಂಡರಲ್ಲದೆ, ಟ್ರೇಡ್ ಯೂನಿಯನ್ ಹಾಗೂ ಪಕ್ಷಗಳಲ್ಲಿ ಪುರುಷರ ಆದಿಪತ್ಯವನ್ನು ವಿರೋಧಿಸುವುದು ತಮ್ಮ ಕಾರ್ಯಸೂಚಿಯ ಒಂದು ಭಾಗವಾಗಿದೆಯೆಂದರು. ಸಲಿಂಗರತಿಯ ಪ್ರಶ್ನೆಯನ್ನು ಸಹ ಎತ್ತಲಾಯಿತು. ಎಲ್ಲಾ ರೀತಿಯ ಪ್ರಜಾಪ್ರಭುತ್ವ ಹಕ್ಕುಗಳಿಗಾಗಿ ಹೋರಾಡುವ ಎಡಪಕ್ಷಗಳು ಸಲಿಂಗರತಿಯ ಪ್ರಶ್ನೆ ಬಂದಾಗ ಫೈಯರ್ ಚಲನಚಿತ್ರದ ಬಗ್ಗೆ ಅವರು ಬರೆದ ಲೇಖನದಲ್ಲಿ ತಮ್ಮ ನಿಲುವನ್ನು ವಿವರಿಸ ಲಾಗಿದೆಯಲ್ಲದೆ, 'ಸಲಿಂಗರತಿ' ಸಹಿಸುವುದು ತಮ್ಮ ತಮ್ಮ ನಿಲುವಾಗಿದೆಯಲ್ಲದೆ, ಅದನ್ನು ಇತ್ಯಾತ್ಮಕವಾಗಿ ಬೆಂಬಲಿಸುವುದು ಅಲ್ಲ ಎಂದು ಅಭಿಪ್ರಾಯಪಟ್ಟರು.

ಮೀಸಲಾತಿಯಲ್ಲಿ 33% ಅಂಕಿಯನ್ನು ಯಾವ ಆಧಾರದ ಮೇಲೆ ಒಪ್ಪಿಕೊಳ್ಳಲಾಯಿತು ಎಂಬ ಪ್ರಶ್ನೆಗೆ ಅದರ ಹಿನ್ನೆಲೆಯನ್ನು ವಿವರಿಸಲಾಯಿತಲ್ಲದೆ, ಸ್ತ್ರೀಯರ ಸಶಕ್ತತೆಯಲ್ಲಿ ಇದು ಮೊದಲನೆಯ ಹೆಜ್ಜೆಯೆಂದು ಒಪ್ಪಿಕೊಳ್ಳಲಾಯಿತು. ಮೀಸಲಾತಿಯಿಂದಾಗಿ ಮಹಿಳೆಯರ ಸ್ಥಾನಮಾನದಲ್ಲಿ ಪ್ರಾಮಾಣಿಕ ಬದಲಾವಣೆ ಸಾಧ್ಯವಾಗುತ್ತದೆಯೇ ಎಂಬ ಪ್ರಶ್ನೆಗೆ ಕೆಲವರು ಇದು

ಕೇವಲ ಸಾಂಕೇತಿಕ ಎಂದರೆ ಕೆಲವರು ಮೀಸಲಾತಿಯನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡರೆ ಮಹಿಳೆಯರ ಸ್ಥಾನಮಾದಲ್ಲಿ ಸ್ವಲ್ಪಮಟ್ಟಿನ ಬದಲಾವಣೆಯನ್ನು ಕಾಣಬಹುದು.

"ಸ್ವಾಯತ್ತ ಮಹಿಳಾ ಚಳುವಳಿ ಒಂದು ವಿಮರ್ಶಾತ್ಮಾಕ ದೃಷ್ಟಿಕೋನ" ವಿಷಯವನ್ನು ಸ್ವಾಯತ್ತ ಮಹಿಳಾ ಸಂಘಟನೆಯಾದ ಸಹೇಲಿ ಮಂಡಿಸಿತು. 1981ರಲ್ಲಿ ಸಹೇಲಿ ಪ್ರಾರಂಭವಾದ ಇತಿಹಾಸವನ್ನು ಹಾಗೂ ಸ್ವರೂಪವನ್ನು ವಿವರಿಸಲಾಯಿತು. ಮಹಿಳೆಯರು ವಿಭಿನ್ನ ಹಿನ್ನೆಲೆಯಿಂದ ಬಂದಿದ್ದರೂ ಮಹಿಳೆಯರೆಂಬ ಒಂದೇ ಸಾಮಾನ್ಯ ಅನುಭವದಿಂದ ಒಂದುಗೂಡಲು ಸಾಧ್ಯವೆನ್ನುವ ಅನುಭವವನ್ನು ಕಂಡುಕೊಳ್ಳಲು ಸಾಧ್ಯವಾಯಿತು. 1980ರಲ್ಲಿ ಮಧ್ಯಮವರ್ಗದ ಮಹಿಳೆಯನ್ನು ಒಳಗೊಂಡ ಹಲವಾರು ಗುಂಪುಗಳು ಹುಟ್ಟಿಕೊಂಡವು. ಮಹಿಳೆಯರ ಸಮಸ್ಯೆಗಳು ಕೇಂದ್ರೀಕರಿಸಿ ವಿಭಿನ್ನವಾದ ದೃಷ್ಟಿಕೋನ ದಿಂದ ಬೆಳಕು ಚೆಲ್ಲುವ ಅಗತ್ಯವನ್ನು ಗುರುತಿಸಲಾಯಿತು. ಈ ಸಂದರ್ಭದಲ್ಲಿ ಪ್ರಗತಿ ಪರ ಸಂಘಟನೆಗಳು ಹಾಗೂ ರಾಜಕೀಯ ಪಕ್ಷಗಳು ಮಹಿಳಾ ಸಮಸ್ಯೆಗಳಿಗೆ ಪ್ರಾಮುಖ್ಯತೆಯನ್ನು ನೀಡದಿರುವ ಧೋರಣೆಯನ್ನು ಟೀಕಿಸಲಾಯಿತು. ಈ ಹಿನ್ನೆಲೆಯಲ್ಲಿ ಹೊಸ ವಿಶ್ಲೇಷಣೆಯನ್ನು ಒಳಗೊಂಡ ಹೊಸ ಗುಂಪುಗಳನ್ನು ಹುಟ್ಟುಹಾಕಲಾಯಿತು. ಇದು ಸಂಘಟನೆಗಳ ಮೂಲಕ ಸ್ವಾಯತ್ತತೆಯ ಹುಡುಕಾಟವಾಗಿತ್ತು. ಸ್ವಾಯತ್ತತೆಯ ಹುಡುಕಾಟದೊಂದಿಗೆ ಇತರ ಪ್ರಗತಿಪರ ಸಂಘಟನೆಗಳೊಡನೆ ಇರಬೇಕಾದ ಸಂಬಂಧವನ್ನು ಒತ್ತಿ ಹೇಳಲಾಯಿತು. ಈ ವಿಮರ್ಶೆಯ ಫಲಿತಾಂಶವಾಗಿ, ಮಹಿಳಾ ಸಂಘಟನೆ ಹಾಗೂ ಪ್ರಗತಿಪರ ಸಂಘಟನೆಯೊಳಗಡೆ ಹಾಗೂ ಹೊರಗಡೆ ಪ್ರಗತಿಪರ ಚಳುವಳಿಗಳೊಡನೆ ಸಂಬಂಧ ಏರ್ಪಡಿಸಲು ಅಗತ್ಯವಾದ ತಂತ್ರಗಳ ಕುರಿತು ನಡೆಯುವ ಚರ್ಚೆಯೇ ಪ್ರಧಾನವಾಗಿದೆ.

ಈ ಹುಡುಕಾಟವೇ ಮಹಿಳಾ ಚಳುವಳಿಯ ಬೆಳವಣಿಗೆಯ ಪ್ರಕ್ರಿಯೆಯಾಗಿದೆ. ಗೊಂದಲ ಹಾಗೂ ಅನುಮಾನಗಳಿಂದ ಕೂಡಿ ಸಂಕೀರ್ಣವಾಗಿದೆ. ಮಹಿಳೆಯರ ಸ್ಥಾನಮಾನ ಹಾಗೂ ಸಾಮಾಜಿಕ, ಆರ್ಥಿಕ ಬೆಳವಣಿಗೆ ನಡುವಿನ ಸಂಬಂಧ ಕುರಿತು ಅರ್ಥ ಮಾಡಿಕೊಳ್ಳುವುದು ಹಾಗೂ ಅನುಭವಗಳನ್ನು ಹಂಚಿಕೊಳ್ಳುವುದು ಅತ್ಯಗತ್ಯವಾಗಿದೆ. ಇದು ರಾಷ್ಟ್ರೀಯ ಸಮ್ಮೇಳನಗಳ ಮೂಲಕ ಸಾಧ್ಯವಾಗಿದೆ. ಪಿತೃಪ್ರಧಾನ ಪರಿಕಲ್ಪನೆ, ಸ್ತ್ರೀವಾದ, ಸ್ವಾಯತ್ತತೆ, ಸ್ವಾತಂತ್ರ್ಯ, ಮಹಿಳಾ ಶ್ರಮ, ಬದಲಾವಣೆಗಾಗಿ ಬೇಕಾಗಿರುವ ತಂತ್ರ ಮುಂತಾದವುಗಳನ್ನು ಕುರಿತು ಸುದೀರ್ಘವಾದ ಚರ್ಚೆ ಸಾಧ್ಯವಾಗಿದೆ. ಇತರೆ ಪ್ರಗತಿಪರ ಚಳುವಳಿಗಳೊಂದಿಗೆ ಕೆಲಸ ಮಾಡುವಾಗ ಸ್ವಾಯತ್ತ ಮಹಿಳಾ ಸಂಘಟನೆಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಬಹುಮುಖ್ಯವಾಗಿದೆ. ಈ ಪ್ರಕ್ರಿಯೆಯು, ಪ್ರಗತಿಪರ ಗುಂಪುಗಳು, ರಾಜಕೀಯ ಪಕ್ಷಗಳು ಸರ್ಕಾರ, ಪ್ರಗತಿಪರ ಚಳುವಳಿಗಳು ತಮ್ಮ ಕಾರ್ಯಸೂಚಿಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಸೇರಿಸಿಕೊಳ್ಳುವಂತೆ ಒತ್ತಡವನ್ನು ಹೇಳುವುದರಲ್ಲಿ ಯಶಸ್ವಿಯಾಗಿದೆ. ಇದು ಮಹಿಳೆಯರ ಸಮಸ್ಯೆಯನ್ನು ಅನಾವರಣಗೊಳಿಸಿದೆಯಲ್ಲದೆ, ಮಹಿಳೆಯರ ಪರವಾಗಿರುವ ಯೋಜನೆ, ಕಾರ್ಯಕ್ರಮ ಹಾಗೂ ನೀತಿಗಳನ್ನು ರೂಪಿಸುವುದಕ್ಕೆ ಪ್ರೇರಣೆಯನ್ನು ನೀಡಿತು. ಈ ರೀತಿಯ ಉಂಟಾದ ಬದಲಾವಣೆಯಿಂದಲೂ ಸಹ ಉದ್ಭವವಾದ ಹೊಸ ಹೊಸ ಶಕ್ತಿಗಳನ್ನು ಮಹಿಳಾ ಚಳುವಳಿ ಎದುರಿಸ ಬೇಕಾಗಿದೆ.

ಈ ಪ್ರತಿಕ್ರಿಯೆಗಳು ಮಹಿಳೆಯರ ಸ್ಥಾನಮಾನದಲ್ಲಿ ಯಾವುದೇ ರೀತಿಯ ಬದಲಾವಣೆಯನ್ನು ಉಂಟುಮಾಡಿಲ್ಲ. ವಿವಿಧ ಆಯಾಮಗಳಲ್ಲಿ ಜನರ ಧೋರಣೆಯನ್ನು ಬದಲಾಯಿಸುವುದರಲ್ಲಿ ವಿಫಲವಾಗಿರುವುದಲ್ಲದೆ, ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯನ್ನು ಸಹ ಕಡಿಮೆ ಮಾಡಲಿಲ್ಲ. ಈ ಕಾರಣದಿಂದ ರಾಜ್ಯದ ಭಾಗವಹಿಸುವಿಕೆಯನ್ನು ಪ್ರಶ್ನೆ ಮಾಡಲೇಬೇಕಾಗುತ್ತದೆ. ಮಹಿಳೆಯರ ಸ್ಥಾನಮಾನದಲ್ಲಿ ಮೂಲಭೂತ ಬದಲಾವಣೆಗಳು ಕಂಡುಬರದಿದ್ದರೂ, ದೊಡ್ಡ ಪ್ರಮಾಣದ ಪ್ರತಿಕ್ರಿಯೆ ಮಹಿಳಾ ಸಮಸ್ಯೆಗಳನ್ನು ರಾಜ್ಯ ಹೇಗೆ ಕೋಆಪ್ಟ್ ಮಾಡಿಕೊಳ್ಳುತ್ತದೆ ಯೆಂಬುದನ್ನು ತೋರಿಸುತ್ತದೆ.

ಮಹಿಳಾ ಚಳುವಳಿಯ ಮೇಲೆ ತನ್ನ ಮಹತ್ತರವಾದ ಪರಿಣಾಮವನ್ನು ಬೀರುತ್ತಿರುವ ವಿದೇಶಿ ಹಣಕಾಸಿನ ನೆರವನ್ನು ಕುರಿತು ವಿವರವಾಗಿ ಚರ್ಚಿಸಲಾಯಿತು. ಸಾಮಾಜಿಕ ಚಳುವಳಿ ಗಳಿಗೆ, ಅದರಲ್ಲೂ ವಿಶೇಷವಾಗಿ ಮಹಿಳಾ ಚಳುವಳಿಗಳಿಗೆ ಹಾಗೂ ಮಹಿಳಾ ಅಧ್ಯಯನಗಳಿಗೆ ಹರಿದು ಬರುತ್ತಿರುವ ವಿದೇಶಿ ನೆರವನ್ನು ಕುರಿತು ಚರ್ಚಿಸುತ್ತಾ, ಪ್ರಸ್ತುತದಲ್ಲಿ ವಿದೇಶಿ ನೆರವು ಸ್ವಯಂ ಸೇವಾ ಸಂಸ್ಥೆಗಳ ಹಾಗೂ ಇತರ ಪ್ರಗತಿಪರ ಎಡಪಂಥೀಯ ಗುಂಪುಗಳ ಸಂಬಂಧವನ್ನು ಕುರಿತು ಆಳವಾಗಿ ಚರ್ಚಿಸುವುದು ಹಾಗೂ ತಂತ್ರಗಳನ್ನು ರೂಪಿಸುವ ಅಗತ್ಯವನ್ನು ಒತ್ತಿ ಹೇಳಲಾಯಿತು.

ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಸರ್ಕಾರದ ನೆರವಿನಿಂದ ನಡೆಯುತ್ತಿರುವ ಮಹಿಳಾ ಕಾರ್ಯಕ್ರಮಗಳು ಹಾಗೂ ಅವುಗಳೊಂದಿಗೆ ಕೆಲಸ ಮಾಡುತ್ತಿರುವ ಮಹಿಳಾ ಗುಂಪುಗಳ ಸಂಖ್ಯೆಯು ಹೆಚ್ಚುತ್ತಿದೆ. ಮಹಿಳೆಯರ ಸಮಸ್ಯೆಗೆ ಸಂಬಂಧಪಟ್ಟಂತೆ

ಇವು ಹೊಂದಿರುವ ದೃಷ್ಟಿಕೋನವನ್ನು ಪ್ರಶ್ನಿಸಬೇಕಾಗುತ್ತದೆ. ವಿದೇಶಿ ನೆರವು ಹಾಗೂ ಸರ್ಕಾರದ ಅನುದಾನದಿಂದ ನಡೆಯುವ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು ಮಹಿಳೆಯರ ಮೇಲೆ 'ಅರಾಜಕೀಯ' ಪರಿಣಾಮವನ್ನು ಬೀರುತ್ತಿರುವ ಹಿನ್ನೆಲೆಯಲ್ಲಿ ವಿದೇಶಿ ನೆರವಿನ ಪ್ರಶ್ನೆಯನ್ನು ಎತ್ತಲಾಯಿತು.

ವಿದೇಶಿ ನೆರವು ಪಡೆಯುತ್ತಿರುವ ಸಂಸ್ಥೆಗಳು, ನೆರವು ನೀಡುವ ಏಜೆನ್ಸಿಗಳಿಗೆ, ಹಾಗೂ ಸರ್ಕಾರಗಳಿಗೆ ಬದ್ಧವಾಗಿರ ಬೇಕಾದ ಕಾರಣ ಇವು ರಾಜಕೀಯ ಪ್ರಶ್ನೆಯನ್ನು ಎತ್ತಲು ಸಾಧ್ಯವಿಲ್ಲ. ಆದರೆ ರಾಜಕೀಯ ಪ್ರಶ್ನೆಗಳನ್ನು ಎತ್ತುವುದು, ಚಳುವಳಿಯ ಅಥವಾ ಹೋರಾಟದ ಬಹುಮುಖ್ಯ ಅಂಶ ವಾಗುತ್ತದೆ. ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರದ ಕಾರ್ಯಕ್ರಮ ಗಳನ್ನು ಜಾರಿಗೊಳಿಸುವ ಏಜೆನ್ಸಿಗಳಾಗಿದ್ದು ಜನವಿರೋಧಿ ನೀತಿಯನ್ನು ಒಳಗೊಂಡಿರುತ್ತದೆಯೆಂಬ ಅಂಶವನ್ನು ಗಮನ ಸೆಳೆಯಲಾಯಿತು.

ಈ ಮೇಲಿನ ವಿಚಾರಗಳೊಂದಿಗೆ ಮಹಿಳಾ ಚಳುವಳಿ ಎದುರಿಸಬೇಕಾದ ಇತರ ಸವಾಲುಗಳನ್ನು ಗುರುತಿಸಲಾಯಿತು. ಬೆಳೆಯುತ್ತಿರುವ ಕೋಮುವಾದ, ಮೂಲಭೂತವಾದ ಹಾಗೂ ಜಾತಿವಾದ, ಮಹಿಳೆಯರಾಗಿ ಅವರ ಅನುಭವ ಹಾಗೂ ಸಂಘಟನೆಯ ಸಾಧ್ಯತೆಯನ್ನು ತಳ್ಳಿಹಾಕಿ ಮತೀಯ ಆಧಾರದ ಮೇಲೆ ಸಂಘಟನೆ ಮಾಡುತ್ತಿವೆ. ಮುಕ್ತ ಆರ್ಥಿಕ ನೀತಿ, ಸಂಕುಚಿತಗೊಳ್ಳುತ್ತಿರುವ ಪ್ರಜಾಪ್ರಭುತ್ವ ಅವಕಾಶ, ಜಾತಿ ಹಾಗೂ ಪಂಗಡಗಳ ಪಾತ್ರ, ಈ ಒತ್ತಡಗಳ ಹಿನ್ನೆಲೆಯಲ್ಲಿ ಸಮಾನತೆಗಾಗಿ ನಡೆಯುತ್ತಿರುವ ಮಹಿಳಾ ಹೋರಾಟಗಳನ್ನು ಹೇಗೆ ಕೇಂದ್ರೀಕರಿಸಬೇಕೆಂಬ ಸವಾಲು ಮಹಿಳಾ ಚಳುವಳಿಯ ಮುಂದಿದೆ.

ಪ್ರೋಗ್ರೆಸೀವ್ ಸ್ಟೂಡೆಂಟ್ ಯೂನಿಯನ್‌ನ ಅಂಜಲಿ ಸಿನ್ಹಾ, ಉತ್ತರ ಪ್ರದೇಶದ ಉತ್ತರ ಭಾಗದಲ್ಲಿ ಕೆಲಸ ಮಾಡುತ್ತಿರುವ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾ, ದೇಶದಾದ್ಯಂತ ಮಹಿಳೆಯರನ್ನು ತಲುಪಲು ವಿಶೇಷ ಪ್ರಯತ್ನ ಗಳನ್ನು ಮಾಡುತ್ತಿರುವುದನ್ನು ವಿವರಿಸಿದರು. ಸ್ವಾಯತ್ತ ಮಹಿಳಾ ಸಂಘಟನೆಗಳ ಪ್ರಯತ್ನದ ಫಲವಾಗಿ ಇಂದು ವಿವಿಧ ಎಡಪಕ್ಷಗಳು ತಮ್ಮ ಕಾರ್ಯಸೂಚಿಯಲ್ಲಿ ಮಹಿಳೆಯರ ಸಮಸ್ಯೆಗಳ ಚರ್ಚೆಗೆ ಅವಕಾಶವನ್ನು ನೀಡಿದ್ದಾರೆ. ಅದು ಇವುಗಳಲ್ಲಿ ಪಿತೃಪ್ರಧಾನತೆಯ ಪರಿಕಲ್ಪನೆ ಹಾಗೂ ಮಹಿಳೆಯರ ದಾಸ್ಯವನ್ನು ವಿವಿಧ ನೆಲೆಗಳಲ್ಲಿ ಅರ್ಥ ಮಾಡಿಕೊಂಡಿರುವುದು.

ಮಾರ್ಕ್ಸ್‌ವಾದಿ ಚಳುವಳಿಯು ಮಹಿಳಾ ಕಾರ್ಯಕರ್ತರನ್ನು ತಯಾರು ಮಾಡುವುದು ಮತ್ತು ಬಂಡವಾಳಶಾಹಿ ವ್ಯವಸ್ಥೆಯನ್ನು ನಾಶಮಾಡುವ ಆದ್ಯತೆಯಲ್ಲಿ ಮಹಿಳಾ ಸಮಸ್ಯೆಯನ್ನು ಕಡೆಗಣಿಸಿರುವುದು, ಸಮಸ್ಯೆಯನ್ನು ಸೀಮಿತ ದೃಷ್ಟಿಕೋನದಿಂದ ನೋಡಿದಂತಾಗುತ್ತದೆ.

ಅಂಜಲಿಯವರು ಗುರುತಿಸಿದ ಇನ್ನೊಂದು ಸಮಸ್ಯೆಯೆಂದರೆ, ಪುರುಷರ ಹಾಗೂ ಮಹಿಳೆಯರನ್ನು, ಮಹಿಳಾ ಸಮಸ್ಯೆಯ ಹೋರಾಟದಲ್ಲಿ ತೊಡಗಿಸುವ ವಿಧಾನದ ಬಗ್ಗೆ, ಮಹಿಳೆಯರ ಸಮಸ್ಯೆಯನ್ನು ಪಕ್ಷದಲ್ಲಿನ ಮಹಿಳೆಯರೇ ಎತ್ತಿಕೊಳ್ಳಬೇಕು ಎನ್ನುವ ಧೋರಣೆ ಹಾಗೂ ಪಕ್ಷದಲ್ಲಿನ ಮಹಿಳೆಯರು ಕೇವಲ ಮಹಿಳೆಯರು ಸಮಸ್ಯೆಗಳಿಗೆ ಸ್ಪಂದಿಸುವುದು ಹಾಗಾಗಿ ಪುರುಷರು, ಲಿಂಗತಾರತಮ್ಯದ ಬಗ್ಗೆ ಸೂಕ್ಷ್ಮವಾಗಿರುವುದು ಅಗತ್ಯವಾಗಿರುತ್ತದೆ.

ಮಹಿಳೆಯರ ಸಮಸ್ಯೆಯನ್ನು ಹೇಗೆ ನೋಡುತ್ತೇವೆ ಎಂಬುದು ಮುಖ್ಯವಾಗುತ್ತದೆ. ಮಹಿಳೆಯರ ಸಮಸ್ಯೆಯನ್ನು ಕೇವಲ ಮಹಿಳಾ ದೃಷ್ಟಿಕೋನದಿಂದ ಪರಿಹರಿಸಲು ಸಾಧ್ಯವೇ? ಪಿತೃಪ್ರಧಾನತೆಯನ್ನು ಇಂದಿನ ಸಾಮಾಜಿಕ, ಆರ್ಥಿಕ, ಸಂದರ್ಭ ಹಾಗೂ ಸರ್ಕಾರದ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಮಹಿಳಾ ಸಮಸ್ಯೆ Vs. ವರ್ಗ ಅಥವಾ ಜಾತಿ, Vs. ವರ್ಗ ಎಂಬ ದೃಷ್ಟಿಕೋನದಿಂದ ನೋಡುವ ನೋಟ ಸೀಮಿತವಾದದ್ದು. ಸಮಸ್ಯೆಯ ಸಂಕೀರ್ಣತೆಯು ಅರ್ಥವಾಗುವುದು ಇವುಗಳ ನಡುವಿರುವ ಸಂಬಂಧಗಳನ್ನು ಗುರುತಿಸಿದಾಗ ಮಾತ್ರ.

ನೀವು ಮಾರ್ಕ್ಸ್‌ವಾದಿಯಾದರೆ ಸ್ತ್ರೀವಾದಿಯಾಗಲು ಸಾಧ್ಯವಿಲ್ಲವೇ ಅಥವಾ ಸ್ತ್ರೀವಾದಿಯಾದರೆ ಮಾರ್ಕ್ಸ್‌ವಾದಿ ಯಾಗಲು ಸಾಧ್ಯವಿಲ್ಲವೇ, ಮಾರ್ಕ್ಸ್‌ವಾದಿಯಾದವರು ಸಮಾಜದ ವಿಕಸನದ ಹಾದಿಯಲ್ಲಿ ಮಹಿಳೆಯರ ಸ್ಥಾನವನ್ನು ಅರ್ಥಮಾಡಿ ಕೊಳ್ಳಬೇಕಾಗುತ್ತದೆ. ಸ್ತ್ರೀವಾದಿಯಾಗಿದ್ದರೆ ತಮ್ಮ ತಿಳುವಳಿಕೆಯ ಹರವನ್ನು ಮಹಿಳಾ ಶೋಷಣೆಯ ಸಮಗ್ರತೆಯಲ್ಲಿ ಅರ್ಥಮಾಡಿ ಕೊಳ್ಳಬೇಕಾಗುತ್ತದೆ.

ತಾತ್ವಿಕ ಭಿನ್ನಾಭಿಪ್ರಾಯಗಳಿದ್ದರೂ ಮಹಿಳಾ ಸಂಘಟನೆಗಳ ನಡುವೆ ಕೆಲಸ ಮಾಡಲು ಸಂಪರ್ಕ ಜಾಲವನ್ನು ಬೆಳೆಸಿಕೊಳ್ಳ ಬೇಕಾಗುತ್ತದೆ. ಬಹಳಷ್ಟು ಮಹಿಳಾ ಸಂಘಟನೆಗಳು ತಮ್ಮನ್ನು 'ರಾಜಕೀಯ ಮುಕ್ತ' ಸಂಘಟನೆಗಳೆಂದು ಹೇಳಿಕೊಳ್ಳುತ್ತಿವೆ. ಆದರೆ ಪಕ್ಷ ರಾಜಕೀಯ ವ್ಯಾಪ್ತಿಯಿಂದ ಹೊರಗಿರುವುದೆಂದರೆ, ರಾಜಕೀಯ ಸ್ವರೂಪವಿಲ್ಲವೆಂದಲ್ಲ.

ಅಜಮೀರ್ ಅಂಚಲ್ ಮಹಿಳಾ ಜನ ಅಧಿಕಾರ ಸಮಿತಿಯ ಬನವಾರಿಯವರು ಅಜಮೀರದಲ್ಲಿ ಹೆದ್ದಾರಿಯನ್ನು ಕಟ್ಟುತ್ತಿರುವುದರಿಂದ ಎದುರಾಗುತ್ತಿರುವ ಸ್ಥಳಾಂತರದ ಸಮಸ್ಯೆಯನ್ನು ವಿವರಿಸಿದರು. ಪಂಚಾಯಿತಿಗಳಲ್ಲಿ ಜಾತಿ ಹಾಗೂ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ಮಾತನಾಡಿದರು. ಬದಲಾವಣೆಗಾಗಿ ಗ್ರಾಮೀಣ ಮಹಿಳೆಯರು ವಿಶೇಷವಾಗಿ ದಲಿತ ಮಹಿಳೆಯರು ತಮ್ಮ ಹೋರಾಟದಲ್ಲಿ ಪೊಲೀಸ್ ದೌರ್ಜನ್ಯವನ್ನು ಎದುರಿಸಬೇಕಾದ ಸಮಸ್ಯೆಯನ್ನು ಗುರುತಿಸುವುದರ ಜೊತೆಗೆ ಗ್ರಾಮೀಣ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ನಡೆಸುವ ಹೋರಾಟದಲ್ಲಿ ನಗರ ಪ್ರದೇಶದ ಮಹಿಳೆಯರ ಬೆಂಬಲವನ್ನು ಪಡೆಯುವುದಿಲ್ಲ. ನಗರ ಮಹಿಳೆಯರ ಆದ್ಯತೆಗಳು ಭಿನ್ನವಾಗಿದೆಯೆಂದರು.

ರಾಜಸ್ಥಾನದ ಸಮನ್ವಯ ಸಮಿತಿಯ ಇಂದಿರ ಪ್ರಗತಿಪರ ಸಂಘಟನೆಗಳು ಹರಿದು ಹಂಚಿಹೋಗಿರುವುದನ್ನು ಕುರಿತು ಮಾತನಾಡುತ್ತಾ, ಅಜಮೀರದ ಸುತ್ತಮುತ್ತ ಆರ್ಥಿಕ ಹಾಗೂ ಕೈಗಾರಿಕೆಗಳ ಬೆಳವಣಿಗೆಯಿಂದಾಗಿ, ಕೆಲವು ಪ್ರಗತಿಪರ ಚಳುವಳಿಗಳು ನಶಿಸಿಹೋಗಿದೆಯೆಂದರು. ಮಹಿಳಾ ಗುಂಪು ಗಳಲ್ಲಿನ ಬಿರುಕು, ಗ್ರಾಮೀಣ ಮಹಿಳೆಯರ ಹೋರಾಟಕ್ಕೆ ಬೆಂಬಲ ದೊರೆಯದೇ ಇರುವುದನ್ನು ಆಳವಾಗಿ ವಿಶ್ಲೇಷಿಸ ಬೇಕಾಗಿದೆಯೆಂದರು.

ದೆಹಲಿಯ ಪುರೋಗಾಮಿ ಮಹಿಳಾ ಸಂಘಟನೆಯ ನಿರ್ಮಲಾ ಚೌದರಿಯವರು ಮೂಲಭೂತವಾದ ಪ್ರಶ್ನೆಯನ್ನು ಕೇಳಿದರು : ಚಳುವಳಿ ಎಲ್ಲಿ ಹೋಗುತ್ತಿದೆ? ನಾವು ತಟಸ್ಥ ಸ್ಥಿತಿಯನ್ನು ತಲುಪಿದ್ದೇವೆಂದು ಅನಿಸುತ್ತದೆ. 25-30 ವರ್ಷಗಳಿಂದ ನಮ್ಮ ಹಕ್ಕುಗಳಿಗಾಗಿ ಹೋರಾಡಿದರೂ ಹೆಚ್ಚು ಏನನ್ನು ಸಾಧಿಸಿದ್ದೇವೆಂದು ಅನಿಸುವುದಿಲ್ಲ. ಮಹಿಳೆಯರಲ್ಲಿ ಅವರ ಹಕ್ಕುಗಳ ಬಗ್ಗೆ ಅರಿವು ಮೂಡಿದೆಯೆಂಬುದರಲ್ಲಿ ಸಂಶಯವಿಲ್ಲ. ಸರ್ಕಾರ ಸಹ ಮಹಿಳಾ ಚಳುವಳಿಯ ಶಕ್ತಿಗೆ ಪ್ರತಿಕ್ರಿಯಿಸುತ್ತಿದೆ. ಆದರೂ ಹೋರಾಟ ನಡೆಯುತ್ತಿರುವ ಮಟ್ಟಕ್ಕೆ ತಕ್ಕ ಫಲಿತಾಂಶವನ್ನು ಪಡೆಯುತ್ತಿಲ್ಲ. ಇದಕ್ಕೆ ಕಾರಣಗಳನ್ನು ವಿದೇಶಿ ಹಣ, ಸರ್ಕಾರದ ಹಾಗೂ ರಾಜಕೀಯ ಒತ್ತಡ ಮುಂತಾದ ಹೊರಗಿನ ಶಕ್ತಿಗಳು, ಈ ಕಾರಣಗಳಿಂದ ಮಹಿಳಾ ಗುಂಪುಗಳಲ್ಲಿ ಬಿರುಕುಗಳುಂಟಾಗುತ್ತಿದೆ. ಮಹಿಳಾ ಸಂಘಟನೆಗಳು ಒಂದುಗೂಡಿ ಕೆಲಸ ಮಾಡುವ ಅಗತ್ಯವನ್ನು ಒತ್ತಿ ಹೇಳುತ್ತಾ, ಕಲೆಕ್ಟಿವ್ ಆಗಿ ಕೆಲಸ ಮಾಡುವತ್ತ ಗಮನ ಹರಿಸಬೇಕಾಗಿದೆಯೆಂದರು.

ಲೆಸಿಬಿಯನ್ ಹಕ್ಕುಗಳ ವೇದಿಕೆಯ ಸದಸ್ಯರು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಲು ವೇದಿಕೆಯನ್ನು ಕಲ್ಪಿಸಿ ಕೊಟ್ಟಿರುವುದಕ್ಕೆ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಾ, ಸಮಾಜ ಹಾಗೂ ಚಳುವಳಿಗಳಲ್ಲಿ ಶ್ರೇಣೀಕೃತ ಸಂಬಂಧಗಳಿರುವುದನ್ನು ಗುರುತಿಸುತ್ತಾ, ಲೆಸಿಬಿಯನ್ ಪ್ರಶ್ನೆಯನ್ನು ಹೇಗೆ ಅಂಚಿಗೆ ತಳ್ಳಲಾಗುತ್ತಿದೆಯೆಂಬುದನ್ನು ವಿವರಿಸಿದರು. ಪ್ರಗತಿಪರ ಸಂಘಟನೆಗಳೆಲ್ಲಾ ಉಪಯೋಗಿಸಿಕೊಳ್ಳುತ್ತಿರುವ ಪಾಸ್ಟರ್ ನೈಮುಲ್ಲರನ ಖ್ಯಾತ ಕವನವನ್ನು ನಿದರ್ಶನ ನೀಡುತ್ತಾ, ಅದರಲ್ಲಿನ ಹೋಮೋಸೆಕ್ಷುಯೊಲಿಟಿಯ ಬಗ್ಗೆ ಇರುವ ಸಾಲನ್ನು ಸೆನ್ಸಾರ್ ಮಾಡುವುದನ್ನು ಎಲ್ಲರ ಗಮನಕ್ಕೆ ತಂದರು. ಲೆಸಿಬಿಯನ್ ಪ್ರಶ್ನೆಯು ಸಾವು ಬದುಕಿನ ಹೋರಾಟವಾಗಬಹುದೆಂದು ಮಮತಾ ಹಾಗೂ ಮೊನಾಲೀಸಾ ಉದಾಹರಣೆ ನೀಡಲಾಯಿತು. ಇವರು ಲೆಸಿಬಿಯನ್ ದಂಪತಿಗಳಾಗಿದ್ದು, ಇಬ್ಬರು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಪಟ್ಟು, ಒಬ್ಬರು ಬದುಕುಳಿದು, ಇನ್ನೊಬ್ಬರು ಕೊಲೆಯ ಆರೋಪವನ್ನು ಎದುರಿಸಿದ್ದಾರೆ. ಇದು ಮಾನವ ಹಕ್ಕುಗಳ ದಮನದ ಪ್ರಶ್ನೆಯಾದರೂ ಯಾವುದೇ ಮಹಿಳಾ ಸಂಘಟನೆಗಳ ತನಿಖೆಯನ್ನು ನಡೆಸಲು ಹೋಗಲಿಲ್ಲ. ಯೇಟ್ಸ್ ವಿರೋಧಿ ಆಂದೋಲನದ ಇಬ್ಬರು ಪುರುಷರು ತನಿಖೆಯನ್ನು ನಡೆಸಲು ಒರಿಸ್ಸಾಗೆ ಹೋದರು. ಮಹಿಳಾ ಚಳುವಳಿಯಿಂದಾಗಿ ಸಮಾಜದಲ್ಲಿ ಹಲವಾರು ರೀತಿಯ ಬದಲಾವಣೆಯಾಗಿದೆ. ಮಹಿಳಾ ಚಳುವಳಿ ಲೆಸಿಬಿಯನ್ ಪ್ರಶ್ನೆಯನ್ನು ಚರ್ಚಿಸುವ ಅವಕಾಶವನ್ನು ಒದಗಿಸಿಕೊಟ್ಟಿದೆ ಯೆಂದರು.

ಮಹಿಳಾ ಮೀಸಲಾತಿಯ ಬಗ್ಗೆ ಭಾಗವಹಿಸಿದ ಬಹುಪಾಲು ಸದಸ್ಯರು ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು.

1. 33% ಮೀಸಲಾತಿಯನ್ನು ಪ್ರತ್ಯೇಕಿಸಿ ನೋಡುವುದು ಸೂಕ್ತವಲ್ಲ.
2. ಮಹಿಳೆಯರು ಶಾಸನ ಸಭೆಗಳನ್ನು ಪ್ರವೇಶಿದ ಕೂಡಲೆ, ಶಾಸನ ಸಭೆಯ ರಾಜಕೀಯ ಬದಲಾಗುತ್ತದೆಯೆ? ಎಂಬುದನ್ನು ಪರಿಶೀಲಿಸಬೇಕು.
3. ಮೀಸಲಾತಿಯು ರಾಜಕೀಯ ಪ್ರಶ್ನೆಯಾಗಿರುವುದರಿಂದ ಸ್ವಾಯತ್ತ ಮಹಿಳಾ ಸಂಘಟನೆಗಳು ಎಡಪಕ್ಷಗಳನ್ನು ಬೆಂಬಲಿಸಬೇಕು.

ಮಹಿಳಾ ಚಳುವಳಿಯು ವೃತ್ತದ ಪರಿಧಿಯಲ್ಲಿರದೆ,

ಕೇಂದ್ರಸ್ಥಾನಕ್ಕೆ ಬರುವುದರಿಂದ ಮಹಿಳಾ ಸಮಸ್ಯೆಗಳನ್ನು ಚರ್ಚಿಸಲು ಅವಕಾಶ ಕಲ್ಪಿಸಿದಂತಾಗುತ್ತದೆ.

ಮೀಸಲಾತಿಯು ಒಂದು ಸಾಂಕೇತಿಕ ಪ್ರಾತಿನಿಧ್ಯವನ್ನು ನೀಡುವ ಪ್ರಶ್ನೆ. ದಲಿತರಿಗೆ ಮೀಸಲಾತಿಯನ್ನು ಒಪ್ಪಿಕೊಳ್ಳುವುದಾದರೆ, ಮಹಿಳೆಯರಿಗೆ ಮೀಸಲಾತಿಯನ್ನು ನೀಡುವುದರ ಬಗ್ಗೆಯು ಮಹಿಳಾ ಚಳುವಳಿಯು ಚಿಂತಿಸಬೇಕಾಗಿದೆ. ಥಾಣೆಯಲ್ಲಿ ಕಾರ್ಪೊರೇಟರ್ ಆಗಿ ಆಯ್ಕೆಯಾಗಿದ್ದ ಮೀನಾ ಮೋರೆಯವರ 'ಕೊಲೆ'ಯನ್ನು ಚರ್ಚಿಸುತ್ತಾ ಇದು ಒಂದು ರಾಜಕೀಯ ಕೊಲೆಯಾಗಿರಬಹುದು. ಅವರ ಸಾವಿಗೆ ಸಂಬಂಧ ಪಟ್ಟಂತೆ ಯಾವುದೇ ಪ್ರಶ್ನೆಯನ್ನು ಎತ್ತಲಾಗಲಿಲ್ಲ. ಶಾಸನ ಸಭೆಗಳಲ್ಲಿ ಮಹಿಳಾ ಮೀಸಲಾತಿಯ ಬಗ್ಗೆ ಚರ್ಚೆ ಮಾಡುವಷ್ಟು ಪಂಚಾಯತ್ ಹಾಗೂ ಕಾರ್ಪೊರೇಷನ್‌ಗಳಲ್ಲಿನ ಮೀಸಲಾತಿಯ ಬಗ್ಗೆ ಚರ್ಚಿಸುತ್ತಿಲ್ಲ. ಈ ಹಂತಗಳಲ್ಲಿ ಮೀಸಲಾತಿಯಿಂದ ಉಂಟಾಗುತ್ತಿರುವ ರಾಜಕೀಯ ಪರಿಣಾಮವನ್ನು ಅಧ್ಯಯನ ಮಾಡಬೇಕಾಗಿದೆ. ಐದು ವರ್ಷಗಳ ಕಾಲ ಅಧಿಕಾರದಲ್ಲಿದ್ದ ಮಹಿಳೆಯರು ಏನು ಹೇಳುತ್ತಾರೆ? ಸ್ಥಳೀಯ ಸಂಸ್ಥೆಗಳಲ್ಲಿ ಲೈಂಗಿಕ ಕಿರುಕುಳ ವಿಷಯವನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ.

ಮಹಿಳೆಯರ ಭೂಮಿ ಒಡೆತನದ ಪ್ರಶ್ನೆಯನ್ನು ಮಹಿಳಾ ಚಳುವಳಿಯು ಎತ್ತದಿರುವ ಕಾರಣವನ್ನು ಸಹ ಕೇಳಲಾಯಿತು. ದುರ್ಬಲ ವರ್ಗದವರಿಗೆ ಸಂಬಂಧಪಟ್ಟ ಎಲ್ಲಾ ಸಮಸ್ಯೆಗಳನ್ನು ಸರ್ಕಾರ ಪರಿಹರಿಸಲು ಮಾರ್ಗಗಳನ್ನು ಹುಡುಕತೊಡಗಿದರೆ, ಮಹಿಳಾ ಸಂಘಟನೆಗಳು ಹೇಗೆ 'ಕೋ-ಆಪ್ಷನ್' ಪ್ರಶ್ನೆಯನ್ನು ನೋಡಬೇಕಾಗುತ್ತದೆ? ಸರ್ಕಾರ ಈ ಕಾರ್ಯಕ್ರಮಗಳನ್ನು ಜಾರಿಗೊಳಿಸುವಾಗ ವಿಕೃತಿಗೊಳಿಸದಂತೆ ಎಚ್ಚರ ವಹಿಸುವುದು ಹೇಗೆ? ಈ ಸಂದರ್ಭದಲ್ಲಿ ರಾಜಸ್ಥಾನದ ಮಹಿಳಾ ಕಾರ್ಯಕ್ರಮವನ್ನು ಚರ್ಚಿಸಲಾಯಿತು. ಸರ್ಕಾರವು ಮಹಿಳಾ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿರುವುದಕ್ಕೆ ಇದು ಉತ್ತಮ ನಿದರ್ಶನ. ಸರ್ಕಾರದ ಈ ಕಾರ್ಯಕ್ರಮಗಳನ್ನು ಜಾರಿಗೊಳಿಸುವಾಗ ವಿಕೃತಿಗೊಳಿಸದಂತೆ ಎಚ್ಚರ ವಹಿಸುವುದು ಹೇಗೆ? ಈ ಸಂದರ್ಭದಲ್ಲಿ ರಾಜಸ್ಥಾನದ W.D.P. ಮಹಿಳಾ ಕಾರ್ಯಕ್ರಮವನ್ನು ಚರ್ಚಿಸಲಾಯಿತು. ಸರ್ಕಾರವು ಮಹಿಳಾ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿರುವುದಕ್ಕೆ ಇದು ಉತ್ತಮ ನಿದರ್ಶನ. ಸರ್ಕಾರದ ಈ ಕಾರ್ಯಕ್ರಮವು ಮಹಿಳಾ ಚಳುವಳಿಯಲ್ಲಿನ ವಿಭಿನ್ನ ದೃಷ್ಟಿಕೋನಕ್ಕೆ ಉತ್ತಮ ನಿದರ್ಶನವಾಗಿದೆ. ಎಲ್ಲಾ ಮಹಿಳಾ ಸಂಘಟನೆಗಳು ಸಾಥಿನ್ ಯೂನಿಯನ್‌ನ್ನೂ ಬೆಂಬಲಿಸುವುದಿಲ್ಲ. ಸರ್ಕಾರಗಳು ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು ಅನಿವಾರ್ಯವಾದರೂ, ಹಲವಾರು ಮಿತಿಗಳನ್ನು ಗಮನಿಸಲೇಬೇಕಾಗುತ್ತದೆ. WDP ಹಾಗೂ ಮಹಿಳಾ ಸಮಾಜದ ಕನಿಷ್ಠ ವೇತನ, ರಜೆ, ಮುಂತಾದ ಮೂಲಭೂತ ಹಕ್ಕುಗಳನ್ನು ಸಹ ಕಿತ್ತುಕೊಳ್ಳಲಾಗುತ್ತಿದೆ. ಸರ್ಕಾರದ ನಿಜವಾದ ಉದ್ದೇಶಗಳನ್ನು ಜನರ ಗಮನಕ್ಕೆ ತರುವುದು ಅಗತ್ಯವಾಗಿದೆ.

ಸಮಯದ ಮಿತಿಯಿಂದಾಗಿ, ಮಹಿಳಾ ಚಳುವಳಿಯಲ್ಲಿ ವಿದೇಶಿ ನೆರವು ಪಡೆಯುವ ಸ್ವಯಂ ಸೇವಾ ಸಂಸ್ಥೆಗಳು, ವಿದೇಶಿ ನೆರವಿನ ಪಾತ್ರ, ಜಾತಿ ಹಾಗೂ ಕೋಮುವಾದಿ ರಾಜಕೀಯ ಚಳುವಳಿಯ ಕಾನೂನನ್ನು ಉಪಯೋಗಿಸುವುದು ಮುಂತಾದ ಪ್ರಶ್ನೆಗಳನ್ನು ಸುದೀರ್ಘವಾಗಿ ಚರ್ಚಿಸಲು ಸಾಧ್ಯವಾಗಲಿಲ್ಲ. ಸಭೆಯು ಆರೋಗ್ಯಕರವಾಗಿ, ಮುಕ್ತವಾಗಿ, ಗೊಂದಲಗಳನ್ನು ಹಂಚಿಕೊಳ್ಳಲು ಅಪರೂಪದ ಅವಕಾಶವನ್ನು ಕಲ್ಪಿಸಿತು. ರಾಜ್ಯದ ಒತ್ತಡ ಹಾಗೂ ಪ್ರತಿಗಾಮಿ ಶಕ್ತಿಗಳನ್ನು ವಿರೋಧಿಸಬೇಕಾದರೆ, ಭಿನ್ನಾಭಿಪ್ರಾಯಗಳಿದ್ದರೂ, ಒಮ್ಮತದಿಂದ ಹೋರಾಡುವುದು ಅಗತ್ಯವೆಂದು ಅಭಿಪ್ರಾಯ ಪಡಲಾಯಿತು.

*ಕನ್ನಡಕ್ಕೆ : ರಾಜೇಶ್ವರಿ ಎಚ್. ಎಸ್.*

## ಲೈಂಗಿಕ ಕಿರುಕುಳದ ವಿರುದ್ಧ ದೂರು

ಶ್ರೀಮತಿ ಮಿಶ್ರಕೌರ್‌ರವರು ದೆಹಲಿಯಲ್ಲಿ ಕಾನ್‌ಸ್ಟೇಬಲ್‌ಆಗಿ ಕೆಲಸ ಮಾಡುತ್ತಿದ್ದಾರೆ. ಅವರ ಜೊತೆಗೆ ಕೆಲಸ ಮಾಡುವ ರಾಜುಪೀರ್ ಸಿಂಗ್, ಅವಳ ಮನೆಗೆ ಹೋಗಿ ಅವಳಿಗೆ ಲೈಂಗಿಕ ಕಿರುಕುಳ ಕೊಡಲು ಪ್ರಾರಂಭಿಸಿದ. ಅವಳು ಪ್ರತಿಭಟಿಸಿದಾಗ, ಅವಳ ಮೇಲೆ ಸಲ್ಲದ ಆರೋಪ ಹೊರಿಸಿ ಮತ್ತಷ್ಟು ಕಿರುಕುಳ ಕೊಡಲು ಪ್ರಾರಂಭಿಸಿದ. ಆಕೆ ದೆಹಲಿಯ ಮೇಲಧಿಕಾರಿಗಳಿಗೆ ದೂರು ನೀಡಿದ್ದಳು. ಆದರೆ ಅದು ಪ್ರಯೋಜನವಾಗಲಿಲ್ಲ. ಮಿಶ್ರ ಮಾನಹಕ್ಕುಗಳ ವೇದಿಕೆಗೆ ದೂರನ್ನು ನೀಡಿದಳು. ರಾಷ್ಟ್ರೀಯ ಮಾನವ ಹಕ್ಕುಗಳ ವೇದಿಕೆಯು ವಿವರವಾಗಿ ತನಿಖೆ ನಡೆಸಿದ ನಂತರ ಶ್ರೀಮತಿ ಮಿಶ್ರ ಕೌರ್‌ರವರಿಗೆ ಲೈಂಗಿಕ ಕಿರುಕುಳವನ್ನು ನೀಡುತ್ತಿದ್ದ ರಾಜುಪೀರ್‌ಸಿಂಗ್ ವಿರುದ್ಧ ಕ್ರಮ ತೆಗೆದುಕೊಳ್ಳಬೇಕೆಂದು ಪೊಲೀಸ್ ನಿರ್ದೇಶಕರಿಗೆ ನೋಟೀಸ್ ಕಳಿಸಿತು. ಆತನನ್ನು ಕೆಲಸದಿಂದ ತೆಗೆದುಹಾಕಬೇಕು ಮತ್ತು ಮಾನಸಿಕ ವೇದನ ಮತ್ತು ಸಾಮಾಜಿಕ ಕಳಂಕವನ್ನು ಅನುಭವಿಸಿದ ಕೌರ್‌ರವರಿಗೆ, ಐವತ್ತು ಸಾವಿರ ರೂ.ಗಳ ಪರಿಹಾರ ಧನ ನೀಡಬೇಕೆಂದು ಆದೇಶಿಸಿತು.

# ಸ್ತ್ರೀವಾದಿ ಚಳುವಳಿ ಸಧ್ಯದ ನಿಲುವುಗಳು

ಭಾರತದಲ್ಲಿ ಸ್ತ್ರೀವಾದಿ ಚಳುವಳಿಯು ಕಾಲು ಶತಮಾನವನ್ನು ಪೂರೈಸಲಿದೆ. 1975ನೆಯ ಇಸವಿಯನ್ನು ವಿಶ್ವಸಂಸ್ಥೆಯು 'ಅಂತಾರಾಷ್ಟ್ರೀಯ ಮಹಿಳಾವರ್ಷ' ಎಂದು ಘೋಷಿಸಿತು. ಆ ವರ್ಷದಿಂದ ಮಹಿಳಾಪರ ಹೋರಾಟವನ್ನು ಅಧಿಕೃತವಾಗಿ 'ಸ್ತ್ರೀವಾದಿ ಚಳುವಳಿ'ಯೆಂದು ಕರೆಯಲಾಗುತ್ತಿದೆ. ಭಾರತದಲ್ಲಿ ಮಹಿಳಾ ಚಳುವಳಿಯ ಬೇರಿರುವುದು 19ನೆಯ ಶತಮಾನದ ಸುಧಾರಣಾವಾದಿ ಚಳುವಳಿಯಲ್ಲಿ, ರಾಜಾರಾಮ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ ಮೊದಲಾದ ಸಮಾಜ ಸುಧಾರಕರು ಮಹಿಳಾ ಸಮಸ್ಯೆಗಳ ನಿವಾರಣೆಗೆ ಬಹಳವಾಗಿ ಶ್ರಮಿಸಿದ್ದರು. ಅನಂತರದಲ್ಲಿ, ರಾಷ್ಟ್ರೀಯ ಚಳುವಳಿಯೂ ಮಹಿಳಾ ಸಮಸ್ಯೆಯನ್ನು ತನ್ನ ಹೋರಾಟದ ಒಂದು ಅಂಗವಾಗಿ ಪರಿಗಣಿಸಿತ್ತು. ಗಾಂಧೀಜಿಯವರ ನೇತೃತ್ವದ ಸ್ವಾತಂತ್ರ್ಯಾಂದೋಲನದಲ್ಲಿ ಮಹಿಳೆಯ ಭಾಗವಹಿಸುವಿಕೆಯು ಮಹಿಳೆ ಮನೆಯಿಂದ ಹೊರಬರಲು ಒಂದು ಅವಕಾಶ ಕಲ್ಪಿಸಿತು. ಇವೆಲ್ಲವುಗಳ ಫಲವಾಗಿ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ದೊರೆತು ಮಹಿಳೆಗೆ ತನ್ನ ಪರಿಸ್ಥಿತಿಯ ಅರಿವು ಮೂಡುವಂತಾದುದು ಈಗ ಇತಿಹಾಸ.

ಕರ್ನಾಟಕದಲ್ಲಿ, ಇತರ ಪ್ರಾಂತ್ಯಗಳಿಗೆ ಹೋಲಿಸಿದರೆ ಮಹಿಳಾಪರ ಹೋರಾಟದ ತೀವ್ರತೆ ಕಡಿಮೆಯಿತ್ತೆಂದೇ ಹೇಳಬಹುದು. ರಾಜಸತ್ತೆಯ ನೆರಳಲ್ಲಿ ಕೆಲಮಟ್ಟಿನ ನೆಮ್ಮದಿಯ ಬದುಕು ಸಾಧ್ಯವಾದದ್ದು ಇದಕ್ಕೆ ಕಾರಣವಿರಬಹುದು. ಮೈಸೂರು ಮಹಾರಾಜರೇ ಬಾಲಿಕಾ ಶಾಲೆಯನ್ನು ಪ್ರಾರಂಭಿಸಿದ್ದರು. ಅದರಿಂದ ಸ್ತ್ರೀ ಶಿಕ್ಷಣಕ್ಕೆ ಅವಕಾಶ ದೊರೆಯಿತು. ಹೀಗೆ ಅವಕಾಶ ಪಡೆದುಕೊಂಡ ಕಮಲಾದೇವಿ ಚಟ್ಟೋಪಾಧ್ಯಾಯ, ಸುಗುಣ ಕಾರ್ನಾಡ, ಉಮಾಬಾಯಿ ಕುಂದಾಪುರ ಮುಂತಾದವರು ಸಾಮಾಜಿಕವಾಗಿಯೂ, ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮ, ಸರಸ್ವತಿ ಬಾಯಿ ರಾಜವಾಡೆ, ಶ್ಯಾಮಲಾದೇವಿ ಬೆಳಗಾಂವಕರ್ ಮೊದಲಾದವರು ತಮ್ಮ ಬರವಣಿಗೆ ಹಾಗೂ ಪತ್ರಿಕೆಗಳ ಮೂಲಕವೂ ಸ್ತ್ರೀ ಸಮಸ್ಯೆಗಳಿಗೆ ಸ್ಪಂದಿಸಿ, ಬದಲಾವಣೆಯ ಹರಿಕಾರರಾದರು.

ಸ್ವಾತಂತ್ರ್ಯ ಪೂರ್ವದಲ್ಲಿ ಸ್ತ್ರೀ ಶಿಕ್ಷಣ, ವಿಧವಾ ಸಮಸ್ಯೆ, ಬಾಲ್ಯವಿವಾಹ, ದ್ವಿಪತ್ನಿತ್ವದಂತಹವು, ಚಳುವಳಿಗೆ ಆದ್ಯತೆಯ ವಿಷಯಗಳಾಗಿದ್ದರೆ ಸ್ವಾತಂತ್ರ್ಯಾನಂತರದ ಎರಡು ದಶಕಗಳಲ್ಲಿ ವರದಕ್ಷಿಣೆ, ಅಸಮವಿವಾಹದಂತಹ ವಿವಾಹ ಸಂಬಂಧಿ ಸಮಸ್ಯೆಗಳು ಸಮಾನ ಕೆಲಸಕ್ಕೆ ಸಮಾನ ವೇತನ, ಮಹಿಳಾ ಹಕ್ಕುಗಳ ಪ್ರತಿಪಾದನೆ ಇವು ಆದ್ಯತೆಯನ್ನು ಪಡೆದವು. ಅನಂತರದ ದಶಕಗಳಲ್ಲಿ ಅತ್ಯಾಚಾರ, ಮಾಧ್ಯಮಗಳಲ್ಲಿ ಮಹಿಳೆಯನ್ನು ಸರಕಾಗಿ ಬಳಸಿಕೊಳ್ಳುವಿಕೆ, ಸ್ತ್ರೀಭ್ರೂಣಹತ್ಯೆ, ಶೀಲ ಪಾತಿವ್ರತ್ಯದಂತಹ ಜೀವ ವಿರೋಧೀ ಮೌಲ್ಯಗಳ ಹೆಸರಿನಲ್ಲಿ ಮಹಿಳೆಯರ ಮೇಲೆ ನಡೆಯುವ ಕೌಟುಂಬಿಕ ಹಿಂಸೆ, ದುಡಿಯುವ ಸ್ಥಳದಲ್ಲಿ ನಡೆಯುವ ಲೈಂಗಿಕ ಆಕ್ರಮಣ ಇವುಗಳ ವಿರುದ್ಧ ಮಹಿಳೆಯರು ದನಿಯೆತ್ತಿದರು. ಈ ದನಿ ಎಷ್ಟೊಂದು ಗಟ್ಟಿಯಾಗಿತ್ತೆಂದರೆ ಸರಕಾರಕ್ಕೆ ತಣ್ಣನೆ ಕೂರಲು ಸಾಧ್ಯವಾಗಲಿಲ್ಲ. ಮಹಿಳೆಯರಿಗೆ ರಕ್ಷಣೆ ನೀಡುವಂತಹ ಕಾನೂನುಗಳು ರಚನೆಯಾಗುವಷ್ಟು ಚಳುವಳಿ ಕ್ರಿಯಾಶೀಲವಾಗಿತ್ತು. ಅತ್ಯಾಚಾರ, ವರದಕ್ಷಿಣೆ ವಿರೋಧಿ ಕಾನೂನುಗಳಲ್ಲದೆ, ಕರ್ನಾಟಕ ಸರಕಾರವು ಮಹಿಳೆಯರಿಗೆ ಆಸ್ತಿಯಲ್ಲಿ ಸಮಾನಹಕ್ಕು ದೊರೆಯುವಂತಹ ಮಸೂದೆಯನ್ನು ಪಾಸುಮಾಡಿತು. ಜೊತೆಗೆ, ದುಡಿಯುವ ಸ್ಥಳದಲ್ಲಿ ಮಹಿಳೆಯನ್ನು ಅಸಭ್ಯವಾಗಿ ನಡೆಸಿಕೊಳ್ಳುವುದನ್ನು ಒಂದು ಅಪರಾಧವಾಗಿ ಪರಿಗಣಿಸುವ ಕಾನೂನು ಕೂಡ ಜಾರಿಗೆ ಬಂತು. ಮದುವೆ, ತಾಯ್ತನ, ಉದ್ಯೋಗಗಳು ಆಕೆಯ ಹಕ್ಕಾಗಬೇಕು. ಮನೆಗೆಲಸಕ್ಕು ಮಾನ್ಯತೆ ಸಿಗಬೇಕು ಎನ್ನುವುದು ಚಳವಳಿಯ ಈಗಿನ ಹಕ್ಕೊತ್ತಾಯ.

ಎಪ್ಪತ್ತರ ದಶಕದಲ್ಲಿ ಸ್ತ್ರೀವಾದಿ ಚಳವಳಿಯು ಮಹಿಳಾ ಸಮಸ್ಯೆಯ ಬೇರಿರುವುದು ಅಸಮಾನತೆಯಲ್ಲಿ ಎನ್ನುವುದನ್ನು ಗುರುತಿಸಿಕೊಂಡಿತು. ಈ ಅಸಮಾನತೆಯನ್ನು ತೊಡೆದುಹಾಕದೆ ಮಹಿಳೆಯರ ಸಮಸ್ಯೆಗಳ ನಿವಾರಣೆ ಸಾಧ್ಯವಿಲ್ಲ ಎಂಬುದನ್ನು ಕಂಡುಕೊಂಡ ಮಹಿಳಾ ಗುಂಪುಗಳು ಸಂಘಟನೆಗೆ ಹೆಚ್ಚಿನ ಒತ್ತುನೀಡಿದವು. ಆ ಕಾರಣದಿಂದ ಈ ದಶಕದಲ್ಲಿ ಸ್ವಾಯತ್ತ ಮಹಿಳಾ ಸಂಘಟನೆಗಳು ರೂಪುಗೊಂಡು ಚಳುವಳಿ ಒಂದು ವ್ಯವಸ್ಥಿತ ಹೋರಾಟವಾಗಿ ಬೆಳೆಯಲು ಕಾರಣವಾಯಿತು.

ಸಮಾನತೆಯ ಪರಿಕಲ್ಪನೆಯ ಸ್ತ್ರೀವಾದಿ ಚಳುವಳಿಯ ಉದ್ದೇಶ ಸ್ತ್ರೀ-ಪುರುಷರೆಂಬ ತಾರತಮ್ಯವಿಲ್ಲದ, ಆಯಾ ವ್ಯಕ್ತಿಗಳ ಸಾಮರ್ಥ್ಯ, ಪ್ರತಿಭೆಗಳಿಗೆ ಅವಕಾಶವಿರುವಂತಹ ಸಮಾಜವೊಂದರ ನಿರ್ಮಾಣ, ಸ್ತ್ರೀ-ಪುರುಷರ ನಡುವಿನ ಅಸಮಾನತೆಯ ನೆಲೆಯಿರುವುದು ನಮ್ಮ ಪರಂಪರೆಯಲ್ಲಿ, ಸಾಹಿತ್ಯ-ಸಂಸ್ಕೃತಿಗಳಲ್ಲಿ

ಮೌಲ್ಯ ವ್ಯವಸ್ಥೆಯಲ್ಲಿ ಎಂಬುದನ್ನು ಅರ್ಥಮಾಡಿಕೊಂಡ ಸ್ತ್ರೀವಾದಿಗಳಿಗೆ ಮಹಿಳಾ ಪರಂಪರೆಯೊಂದನ್ನು ನಿರ್ಮಿಸುವ ಅಗತ್ಯವಿದೆ ಎನ್ನುವುದು ಮನದಟ್ಟಾಯಿತು. ಹಾಗಾಗಿ, ಮರೆತುಹೋದ ಸ್ತ್ರೀ ಚೇತನಗಳ ಸಾಧನೆಗಳನ್ನು ಅನಾವರಣಗೊಳಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಸಾಹಿತ್ಯ-ಸಂಸ್ಕೃತಿಗಳಲ್ಲಿನ ಮಹಿಳೆಯ ಗೈರುಹಾಜರಿಗೆ ನಮ್ಮ ಮೌಲ್ಯ ವ್ಯವಸ್ಥೆಯಲ್ಲಿರುವ ದ್ವಿಸ್ತರ ನ್ಯಾಯವೇ ಕಾರಣವೆಂದರಿತು ಈ ಅಮಾನವೀಯ ಮೌಲ್ಯಗಳನ್ನು ಬರವಣಿಗೆಯ ಮೂಲಕ ಪ್ರತಿಭಟಿಸಿದರು. ಸಾಹಿತ್ಯ ಕೃತಿಗಳಲ್ಲಿ ಈ ಪ್ರತಿಭಟನೆಯ ದನಿ ಅನುರಣಿತವಾದದ್ದನ್ನು ನೋಡಬಹುದು. ಸಾಹಿತ್ಯದಲ್ಲಿ ಜಾತಿ, ವರ್ಗ, ಧರ್ಮಗಳನ್ನು ಮೀರಿ ಈ ಪ್ರತಿಭಟನೆ ಕಾಣಿಸಿಕೊಂಡಿದೆ. ಪ್ರಾರಂಭದಲ್ಲಿ ಸ್ತ್ರೀವಾದಿ ಚಳುವಳಿಯ ಆಲೋಚನಾ ಕ್ರಮವು ಸೃಜನಶೀಲ ಸಾಹಿತ್ಯರೂಪದಲ್ಲಿ ಪ್ರಕಟವಾಗಿದ್ದರೂ ಅನಂತರದ ವರ್ಷಗಳಲ್ಲಿ ಕೆಲವು ಸ್ವಾಯತ್ತ ಸಂಘಟನೆಗಳು ಮಹಿಳಾಪರ ಪತ್ರಿಕೆಗಳನ್ನು ಹೊರತರುತ್ತಿದ್ದು ಅಂದಂದಿನ ಅಗತ್ಯಗಳಿಗನು ಗುಣವಾಗಿ ಚಳುವಳಿಯ ಆದ್ಯತೆಗಳನ್ನು ಪ್ರಚುರಪಡಿಸಲು ಶ್ರಮಿಸುತ್ತಿವೆ. ಮಾನಸ, ಅಚಲ ಪತ್ರಿಕೆಗಳು, 'ವಿಮೋಚನಾ', 'ಸಮತಾ' ವಾರ್ತಾಪತ್ರಗಳು ಮತ್ತು ಸಮತಾ ಅಧ್ಯಯನ ಕೇಂದ್ರದ ಪ್ರಕಟನೆಗಳನ್ನು ಹೆಸರಿಸಬಹುದು. ಜೊತೆಗೆ, 'ಲೇಖಕಿಯರ ಸಂಘ', 'ಮಹಿಳಾ ಸಾಹಿತ್ಯಿಕಾ'ಗಳು ಮಹಿಳೆಯರ ಬರವಣಿಗೆ ಗಳನ್ನು ಪ್ರಕಟಿಸುವ ಕಾರ್ಯವನ್ನು ಹಮ್ಮಿಕೊಂಡಿವೆ.

ಇತರ ಚಳುವಳಿಗಳಂತೆ ಸ್ತ್ರೀವಾದಿ ಚಳುವಳಿಯೂ ತನ್ನ ಹೋರಾಟದ ಸ್ವರೂಪವನ್ನು ಸ್ಪಷ್ಟಪಡಿಸಿಕೊಳ್ಳಲು, ತಾತ್ತ್ವಿಕ ನೆಲೆಯನ್ನು ಪ್ರಚುರಪಡಿಸಲು ಬರವಣಿಗೆಯನ್ನು ಒಂದು ಮಾಧ್ಯಮವಾಗಿ ಸ್ವೀಕರಿಸಿದೆ. ಇದರಲ್ಲೂ ಸೃಜನಶೀಲ ರಚನೆಗಳು, ಸೈದ್ಧಾಂತಿಕ ಹಾಗೂ ವಿಮರ್ಶಾ ಬರಹಗಳು ಸೇರಿವೆ. 'ಅಂತಾರಾಷ್ಟ್ರೀಯ ಮಹಿಳಾ ವರ್ಷ' (1975)ವನ್ನು ಮಹಿಳಾ ಚಳುವಳಿಯ ದೃಷ್ಟಿಯಿಂದ ಬಹಳ ಮುಖ್ಯ ಎಂದು ಗುರುತಿಸಬೇಕಾಗುತ್ತದೆ. ಇದಕ್ಕೆ ಪೂರ್ವದಲ್ಲಿಯೇ ಸಾಹಿತ್ಯ ರಚನೆಗೆ ತೊಡಗಿದ ಲೇಖಕಿಯರು ಕೂಡ ತಮ್ಮ ಬರವಣಿಗೆಯ ಜಾಡನ್ನು ಬದಲಿಸಿಕೊಂಡರು. ಉದಾಹರಣೆಗೆ ಅನುಪಮಾ ನಿರಂಜನ ಅದರ ಬರವಣಿಗೆಯ ಭಿನ್ನತೆಯನ್ನು ಗಮನಿಸಬಹುದು. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಮಹಿಳೆಯರ ಸಮಸ್ಯೆಗಳನ್ನು ಲಿಂಗ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು, ಪ್ರತಿಕ್ರಿಯಿಸಲು ಪ್ರಾರಂಭಿಸಿದ್ದು ಈ ದಶಕದಲ್ಲಿಯೇ. ಶೈಲಜಾ ಉಡಚಣ, ಮಾಲತಿ ಪಟ್ಟಣಶೆಟ್ಟಿ, ವಿಜಯಾದಬ್ಬೆ, ವೇದವತಿ, ಭಾಗ್ಯಜಯ ಸುದರ್ಶನ, ಪ್ರತಿಭಾ ನಂದಕುಮಾರ್, ಸರಸ್ವತಿಗೌಡ, ಚ. ಸರ್ವಮಂಗಳ, ಹೇಮಾಪಟ್ಟಣಶೆಟ್ಟಿ, ಸುಕನ್ಯಾ ಮಾರುತಿ, ಎಚ್. ಎಲ್. ಪುಷ್ಪ, ಎಂ. ಎಸ್. ವೇದಾ ಮುಂತಾದವರ ಕಾವ್ಯಗಳು, ಎಚ್. ವಿ. ಸಾವಿತ್ರಮ್ಮ, ವೀಣಾ ಶಾಂತೇಶ್ವರ, ಅನುಪಮಾ ನಿರಂಜನ, ಸಾರಾ ಅಬೂಬಕ್ಕರ್, ಕಮಲಾಹಮ್ಮಿಗೆ, ಭಾನುಮುಷ್ತಾಕ್, ವೈದೇಹಿ, ಗಂಗಾ ಪಾದೇಕಲ್, ಭಾಗೀರಥಿ ಹೆಗಡೆ, ನೇಮಿಚಂದ್ರ, ಎಂ. ಎಸ್. ವೇದಾ ಮೊದಲಾದವರ ಕಥಾಸಾಹಿತ್ಯ - ಇವು ಕರ್ನಾಟಕದಲ್ಲಿ ಮಹಿಳಾ ಚಳುವಳಿ ಕ್ರಿಯಾಶೀಲವಾಗುಳಿಯಲು ಸಹಾಯಕವಾಗಿವೆ. ಸಾಹಿತ್ಯ ಮತ್ತು ಜನಪದ ಹೋರಾಟಗಳು ಒಂದಕ್ಕೊಂದು ಪೂರಕ ಎನ್ನುವುದನ್ನು ಇತಿಹಾಸ ತೋರಿಸಿಕೊಟ್ಟಿದೆ. ಸೃಜನಶೀಲ ಬರವಣಿಗೆಗಳಲ್ಲಿನ ಪ್ರತಿಭಟನೆಯ ಸ್ವರೂಪ ಹಿಂದಿನ ದಶಕಗಳಿಗೆ ಹೋಲಿಸಿದರೆ ಹೆಚ್ಚು ರಚನಾತ್ಮಕವಾಗಿದೆ. ಇಂತಹ ಕೃತಿಗಳು ಹಿರಿಯ-ಕಿರಿಯ ಲೇಖಕಿಯರೆಲ್ಲರಿಂದ ರಚಿತವಾಗಿವೆ. ಯಾವುದೇ ಗೊಂದಲವಿಲ್ಲದೆ, ಹೆಚ್ಚು ನಿಖರತೆಯಿಂದ ಕೂಡಿದ ಸೈದ್ಧಾಂತಿಕ ಬರವಣಿಗೆಗಳು ಬರುತ್ತಿವೆ. ಸ್ತ್ರೀವಾದಿ ವಿಮರ್ಶಕರು ಪ್ರಾಚೀನ ಹಾಗೂ ಅರ್ವಾಚೀನ ಸಾಹಿತ್ಯದ ಪುರುಷರ ಮತ್ತು ಮಹಿಳೆಯರ ಕೃತಿಗಳ ಸ್ತ್ರೀ ಕೇಂದ್ರಿತ ನೆಲೆಯ ಇತಿ-ಮಿತಿಗಳನ್ನು ವಿಶ್ಲೇಷಿಸುವ, ಪ್ರಶ್ನಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಹೀಗೆ ಮಾಡುವಾಗ ನಮ್ಮ ಭಾಷೆ ಹೇಗೆ ಪುರುಷಕೇಂದ್ರಿತವಾದದ್ದು ಎನ್ನುವುದನ್ನು ಗುರುತಿಸುವ ಕಡೆಗೂ ಗಮನ ಹರಿಸುತ್ತಿದ್ದಾರೆ. ಬೈಗುಳಗಳಲ್ಲಿ, ಗಾದೆಗಳಲ್ಲಿ, ನುಡಿಗಟ್ಟುಗಳಲ್ಲಿ ಬಿಂಬಿತವಾಗಿರುವ ಮಹಿಳೆಯ ಅಸ್ತಿತ್ವವು ಕೆಳಮಟ್ಟದಲ್ಲಿರುವುದಕ್ಕೆ ನಮ್ಮ ಲಿಂಗತಾರತಮ್ಯದ ದೃಷ್ಟಿಯೇ ಕಾರಣ ಎನ್ನುವುದನ್ನು ಜನಸಾಮಾನ್ಯರ ಗಮನಕ್ಕೆ ತರುವ ಪ್ರಯತ್ನವೂ ನಡೆಯುತ್ತಿದೆ. ಈ ದಿಸೆಯಲ್ಲಿ ವಿಜಯಾದಬ್ಬೆ, ಬಿ. ಎನ್. ಸುಮಿತ್ರಾಬಾಯಿ, ಎನ್. ಗಾಯಿತ್ರಿ, ಗಾಯತ್ರಿನಾವಡ ಹಾಗೂ ಇನ್ನು ಕೆಲವರು ತೊಡಗಿಕೊಂಡಿದ್ದಾರೆ.

ಇತ್ತೀಚಿಗಿನ ವರ್ಷಗಳಲ್ಲಿ ಮಹಿಳಾ ಅಧ್ಯಯನವು ಒಂದು ಶಿಸ್ತಾಗಿ ಬೆಳೆಯುತ್ತಿದ್ದು, ವಿಶ್ವವಿದ್ಯಾನಿಲಯಗಳು ಹಾಗೂ ಇನ್ನಿತರ ಸಂಸ್ಥೆಗಳು ಮಹಿಳಾ ವಿಷಯವನ್ನು ಒಂದು ಶೈಕ್ಷಣಿಕ ವಿಷಯವಾಗಿ ಬೋಧಿಸುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯ, ಹಂಪಿ ವಿಶ್ವವಿದ್ಯಾಲಯ ಹಾಗೂ ಎಸ್.ಎಂ.ಕೆ.ಆರ್.ವಿ. ಕಾಲೇಜುಗಳನ್ನು ಉದಾಹರಣೆಗೆ ಗಮನಿಸಬಹುದು. ಜೊತೆಗೆ, ಹಿಂದುಳಿದ ಮಹಿಳೆಯರ ಹಾಗೂ ಪರಿಶಿಷ್ಟ ಮಹಿಳೆಯರನ್ನು ಕುರಿತ ಅಧ್ಯಯನಗಳೂ ನಡೆಯುತ್ತಿವೆ. ಇವೆಲ್ಲ ಸಾಂಸ್ಥಿಕ ರೂಪದಲ್ಲಿ ನಡೆಯುತ್ತಿದ್ದರೆ, ಸ್ವಾಯತ್ತ ಮಹಿಳಾ ಗುಂಪುಗಳು ಹೊಸ ಸಂಸ್ಕೃತಿಯ ನಿರ್ಮಾಣದ ಕಡೆ ಹೆಚ್ಚು ಕ್ರಿಯಾಶೀಲವಾಗಿವೆ. ನಮ್ಮ ಮಾತೃಪ್ರಧಾನ ಹಾಗೂ ಮಾತೃ ಸ್ಥಳೀಯ ಕುಟುಂಬ

ವ್ಯವಸ್ಥೆಯಲ್ಲಿನ ಮಹಿಳೆಯ ಸ್ಥಾನದ ಬಗೆಗಿನ ಹುಡುಕಾಟ, ಜನಪದ ಸಾಹಿತ್ಯದ ಮಹಿಳಾ ನೆಲೆಯ ಶೋಧನೆ, ಮದುವೆ, ಹಬ್ಬಗಳು ಹಾಗೂ ಇನ್ನಿತರ ಕ್ರಿಯಾಚರಣೆಯಲ್ಲಿನ ಮಹಿಳಾ ಪ್ರಾತಿನಿಧ್ಯ ಕುರಿತ ಅಧ್ಯಯನ - ಈ ಮೂಲಕ ಮಹಿಳಾ ಪರಂಪರೆಯೊಂದರ ನಿರ್ಮಾಣಕ್ಕೆ ಪ್ರಯತ್ನಿಸಲಾಗುತ್ತಿದೆ. ಜನಪದ ಹಾಡುಗಳಲ್ಲಿ ಮಹಿಳಾ ಪ್ರಧಾನತೆಯ ಕಥನ ಭಾಗದ ಹಾಡುಗಾರಿಕೆ, ಜನಪದ ಪುರಾಣ ಹಾಗೂ ಕಾವ್ಯಗಳಲ್ಲಿ- 'ಸಿರಿ' ಪಾಡ್ದನ ಮತ್ತು ಕೊಂತಿ ಪೂಜೆ ಇತ್ಯಾದಿ - ಸ್ತ್ರೀ ಪ್ರತೀಕಗಳ ಅಧ್ಯಯನ ಇವು ವ್ಯಾಪಕವಾಗಿ ಪ್ರಾರಂಭವಾಗಿವೆ. ವಿಜಯಾದಬ್ಬೆ ಯವರು ಹೇಳುವಂತೆ 'ನಮ್ಮ ಸಾಂಸ್ಕೃತಿಕ ಅತೀತದಲ್ಲಿ ಇವತ್ತಿನ ಸ್ತ್ರೀಯರು ಒಪ್ಪಿ, ಅನುಸರಿಸಬಹುದಾದ ಇತ್ಯಾತ್ಮಕ ಮಾದರಿಗಳು ಇವೆಯೆ ಎಂಬುದನ್ನು ತಿಳಿಯಬೇಕಾದ್ದು ಇಂದು ಬಹಳ ಅಗತ್ಯ.....ಅದಕ್ಕಾಗಿ ನಾವು ಅವೈದಿಕ ಸಂಸ್ಕೃತಿಗಳತ್ತ ನೋಟ ಹರಿಸಬೇಕಾಗುತ್ತದೆ.'

ಸಾಹಿತ್ಯ ಮಾತ್ರವಲ್ಲದೆ, ಇನ್ನಿತರ ಕಲಾಮಾಧ್ಯಮಗಳ ಮೂಲಕವೂ ಮಹಿಳೆಯರಲ್ಲಿ ಅರಿವು ಮೂಡಿಸಬೇಕೆನ್ನುವ ಕಡೆಗೂ ಗಮನಹರಿಸಲಾಗುತ್ತಿದೆ. ಈ ದಿಕ್ಕಿನಲ್ಲಿ ಅಪರ್ಣಾ ಸಿಂಧೂರ್ ಅವರು ಪ್ರಸ್ತುತ ಪಡಿಸಿದ ಭಾರತದ ಮಹಿಳೆ ಹಾಗೂ 'ಒಂದು ಘಟನೆಯ ಸುತ್ತ' ಎನ್ನುವ ದೃಶ್ಯರೂಪಕಗಳನ್ನು ಉದಾಹರಿಸ ಬಹುದು. ಭರತನಾಟ್ಯದಂತಹ ಶಾಸ್ತ್ರೀಯ ನೃತ್ಯದ ಮೂಲಕ ಜನಸಾಮಾನ್ಯರಿಗೆ ಮಹಿಳಾ ಸಂದೇಶವನ್ನು ತಲುಪಿಸುವ ಒಂದು ಗಮನಾರ್ಹ ಪ್ರಯತ್ನ ಇದಾಗಿತ್ತು.

ಸ್ತ್ರೀವಾದಿ ಚಳವಳಿಯು ಆರಂಭಿಕ ವರ್ಷಗಳಲ್ಲಿ ಪಾಶ್ಚಿಮಾತ್ಯ ದೇಶಗಳಿಂದ ಪ್ರೇರಣೆಯನ್ನು ಪಡೆದಿದ್ದರೂ ಅನಂತರದಲ್ಲಿ ಸ್ಥಳೀಯ ಸಮಸ್ಯೆಗಳಿಗೆ ಆದ್ಯತೆ ನೀಡುತ್ತ, ನಗರದ ಮಧ್ಯಮ ವರ್ಗದ ಮಹಿಳೆಯರ ಹೋರಾಟ ಎನ್ನುವ ಆಪಾದನೆಯಿಂದ ಮುಕ್ತವಾಗುವ ರೀತಿಯಲ್ಲಿ ಕಾರ್ಯತಂತ್ರವನ್ನು ರೂಪಿಸಿಕೊಂಡಿದೆ. ಸ್ವಾಯತ್ತ ಸಂಘಟನೆಗಳು ಸಾಮಾನ್ಯ ಮಹಿಳಾ ಸಮಸ್ಯೆಗಳೊಂದಿಗೆ ಸ್ಥಳೀಯ ಸಮಸ್ಯೆಗಳ ಬಗೆಗೂ ಸ್ಪಂದಿಸುತ್ತ ಬಂದಿವೆ. ಚಂದ್ರಗುತ್ತಿಯಲ್ಲಿ ನಡೆಯುತ್ತಿದ್ದ ಬೆತ್ತಲೆ ಸೇವೆ ಇರಬಹುದು. ಸವದತ್ತಿಯಲ್ಲಿ ಬಸವಿ ಬಿಡುವುದಿರಬಹುದು, ಇಂತಹ ಅಮಾನವೀಯ ಪದ್ಧತಿಯ ವಿರುದ್ಧ ಹೋರಾಟ ಕೈಗೊಂಡಿವೆ, ಜನಜಾಗೃತಿಯನ್ನುಂಟು ಮಾಡಲು ಶ್ರಮಿಸುತ್ತಿವೆ. ಕೇಂದ್ರ ಸಮಿತಿ ಎನ್ನುವ ಸ್ವರೂಪದಿಂದ ಭಿನ್ನವಾದ, ಬಿಡಿಬಿಡಿಯಾದ ಸಂಘಟನೆಗಳಾಗಿ ಕೆಲಸ ಮಾಡುತ್ತಿವೆ. ಕರ್ನಾಟಕದಲ್ಲಿ ಸ್ತ್ರೀವಾದಿ ಚಳವಳಿಯು ಉಳಿದ ಜನಪದ ಚಳವಳಿಯಲ್ಲಿ ಪಾಲುಗೊಂಡಿದೆ; ಎಡಪಂಥೀಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದೆ; ಮದ್ಯಪಾನ ವಿರೋಧಿ ಆಂದೋಲನದ ಭಾಗವಾಗಿಯೂ ಕೆಲಸ ಮಾಡುತ್ತಿದೆ; ಪರಿಸರ ಚಳುವಳಿಯೊಂದಿಗೆ ಸಂಬಂಧ ಹೊಂದಿದೆ.

ಈಗ ಸ್ತ್ರೀವಾದಿ ಚಳುವಳಿಯು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಿದೆ. ಪುರುಷಾಧಿಕಾರದ ಅಡಿಯಲ್ಲಿ ಎಷ್ಟೇ ಹೋರಾಡಿದರೂ ಸಮಾನತೆಯ ಸಮಾಜ ನಿರ್ಮಾಣದ ತನ್ನ ಕನಸು ಕನಸಾಗಿಯೇ ಉಳಿಯಬಹುದೆನ್ನುವ ದೃಷ್ಟಿಯಿಂದ ಸ್ತ್ರೀವಾದಿಗಳು ರಾಜಕೀಯ ಅಧಿಕಾರವನ್ನು ಪಡೆಯಲು ಕ್ರಿಯಾಶೀಲವಾಗಿ ಪ್ರಯತ್ನಿಸುತ್ತಿದ್ದಾರೆ. ಕುಟುಂಬಹಲ್ಲಾಗಲಿ, ಸಮಾಜದಲ್ಲಾಗಲಿ ಮಹಿಳೆಗೆ ನಿರ್ಣಯ ತೆಗೆದುಕೊಳ್ಳುವ ಅಧಿಕಾರವಿರುವುದು ತೀರ ಅಪರೂಪ. ಇದನ್ನು ಪಡೆಯಲು ಆಕೆ ರಾಜಕೀಯ ಅಧಿಕಾರದಲ್ಲಿ ಪಾಲುದಾರಳಾಗುವುದು ಅತ್ಯಗತ್ಯವೆಂದು ಭಾವಿಸಿರುವ ಮಹಿಳೆಯರು ರಾಜಕೀಯ ಮೀಸಲಾತಿಗಾಗಿ ಒತ್ತಾಯಿಸುತ್ತಿದ್ದಾರೆ. ಕರ್ನಾಟಕದಲ್ಲಿ ಪಂಚಾಯಿತಿ ಮಟ್ಟದಲ್ಲಿ ಸಿಕ್ಕ ಮೀಸಲಾತಿಯ ಕಾರಣದಿಂದ ಅನೇಕ ಮಹಿಳೆಯರಿಗೆ 'ಶಕ್ತಿ ರಾಜಕಾರಣ'ದ ಲಾಬಿ ಏನೆನ್ನುವುದು ಅರ್ಥವಾಗುತ್ತಿದೆ. ಉಪಯುಕ್ತವಾಗುವಂತೆ ಅಧಿಕಾರ ನಡೆಸುವುದು ಹೇಗೆನ್ನುವುದನ್ನು ಕಂಡುಕೊಳ್ಳುತ್ತಿದ್ದಾರೆ. ಅವಕಾಶವಾದಿ ಮಹಿಳೆಯರು ತಮ್ಮ ಬಲವರ್ಧನೆಗಾಗಿ ಈ ಮೀಸಲಾತಿಯನ್ನು ಬಳಸಿಕೊಳ್ಳಲು ಬಿಡಬಾರದು, ಮಹಿಳೆಯರ ಬಗೆಗೆ ನಿಜವಾದ ಕಳಕಳಿಯಿರುವ ಮಹಿಳೆಯರಿಗೆ, ಅವಕಾಶ ವಂಚಿತ ಮಹಿಳೆಯರಿಗೆ ಇಂತಹ ಮೀಸಲಾತಿ ಸಿಗಬೇಕೆನ್ನುವುದು ಸ್ತ್ರೀವಾದಿಗಳ ಆಶಯವಾಗಿದೆ.

ದೀರ್ಘಕಾಲದ ಮಹಿಳಾಪರ ಹೋರಾಟದ ಫಲವಾಗಿ ಸರಕಾರಗಳು ಮಹಿಳಾ ಚಳವಳಿಯ ಪರಿಭಾಷೆಯನ್ನು ಬಳಸಿಕೊಂಡು ವಿಧಾಯಕ ಕಾರ್ಯಕ್ರಮಗಳನ್ನು ನಡೆಸಲು ಉದ್ಯುಕ್ತವಾಗಿವೆ. ಇಂತಹ ಅವಕಾಶವನ್ನು ಅನೇಕ ಸರಕಾರೇತರ ಸಂಘಟನೆಗಳು ಬಳಸಿಕೊಳ್ಳಲು ಪೈಪೋಟಿ ನಡೆಸುತ್ತಿವೆ. ದೇಶೀಯ ಹಾಗೂ ವಿದೇಶೀಯ ಧನಸಹಾಯ ಪಡೆದು ನಡೆಯುತ್ತಿರುವ ಈ ಸಂಸ್ಥೆಗಳು ಮಹಿಳಾ ಚಳುವಳಿಯ ಹರಿಕಾರರೆಂದು ತಮ್ಮನ್ನು ಗುರುತಿಸಿಕೊಳ್ಳುತ್ತಿವೆ. ಇಂತಹ ಸಂಸ್ಥೆಗಳಿಂದ ದೂರವಿದ್ದು, ತಮ್ಮ ಸ್ವಾಯತ್ತತೆಯನ್ನು ಉಳಿಸಿಕೊಳ್ಳುವುದು ಇಂದಿನ ಅಗತ್ಯವೆಂದು ಸ್ವಾಯತ್ತ ಸಂಘಟನೆಗಳು ನಂಬುತ್ತಿವೆ. ಇಲ್ಲದಿದ್ದಲ್ಲಿ ರಾಜಕೀಯ ಆಮಿಷಗಳಿಗೆ ಬಲಿಯಾಗಿ ಚಳುವಳಿ ದುರ್ಬಲವಾಗುವ ಸಾಧ್ಯತೆಯಿದೆ ಎಂದು ಭಾವಿಸಲಾಗಿದೆ.

ಮಹಿಳೆಯರ ಮೇಲಿನ ದೌರ್ಜನ್ಯ ಹೆಚ್ಚುತ್ತಿರುವುದನ್ನು ಕಂಡ ಕೆಲವು ಸಂಘಟನೆಗಳು 'ಸತ್ಯ ಸಂಶೋಧನಾ ಸಮಿತಿ'ಯನ್ನು ರಚಿಸಿಕೊಂಡು ಅಪರಾಧ ನಡೆದಾಗ ಸರಿಯಾದ ಮಾಹಿತಿ

ಸಂಗ್ರಹಿಸುವ, ವರದಿ ಮಾಡುವ ನ್ಯಾಯ ದೊರಕಿಸಲು ಹೋರಾಡುವ ದಿಸೆಯಲ್ಲಿ ಕಾರ್ಯಪ್ರವೃತ್ತಿವಾಗಿವೆ. ಸಾಕಷ್ಟು ಮಹಿಳಾಪರ ಕಾನೂನುಗಳು ಇದ್ದಾಗ್ಯೂ ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಇರುವ ಅಡೆತಡೆಗಳನ್ನು ಹಾಗೂ ಕಾನೂನಿನಲ್ಲಿರುವ ದೋಷಗಳನ್ನು ಸರಕಾರದ ಹಾಗೂ ಸಾರ್ವಜನಿಕರ ಗಮನಕ್ಕೆ ತರುವಲ್ಲಿ ಇಂತಹ ಸಮಿತಿಗಳು ಸಹಾಯಕವಾಗುತ್ತವೆ ಎಂದು ತಿಳಿಯಲಾಗಿದೆ.

ಸ್ತ್ರೀವಾದಿಯಾಗಲು ಭೌತಿಕವಾಗಿ ಸ್ತ್ರೀಯಾಗಬೇಕಿಲ್ಲ. ಸ್ತ್ರೀ ಸಮಾನತೆಯಲ್ಲಿ ವಿಶ್ವಾಸವಿಟ್ಟಿರುವ ಪುರುಷ ಕೂಡ ಸ್ತ್ರೀವಾದಿಯೇ, ಈ ಅರ್ಥದಲ್ಲಿ ಗಾಂಧೀಜಿಯವರನ್ನು ಭಾರತದ ಮೊದಲ ಸ್ತ್ರೀವಾದಿಯೆಂದು ಹೇಳಲಾಗುತ್ತದೆ. ಸ್ತ್ರೀವಾದಿ ಚಳುವಳಿಯು ಪುರುಷರನ್ನೂ ಸೇರಿಸಿಕೊಂಡು ಮುನ್ನಡೆಯುತ್ತಿದೆ. ಪುರುಷಪ್ರಧಾನ ಸಂಸ್ಕೃತಿಯು 'ಮಹಿಳಾ ಮಾದರಿ'ಗಳಂತೆ 'ಪುರುಷ ಮಾದರಿ' ಗಳನ್ನು ನಿರ್ಮಿಸಿದೆ. ಎಷ್ಟೋ ಸನ್ನಿವೇಶಗಳಲ್ಲಿ ಪುರುಷನೂ ಆ ಮಾದರಿಗಳನ್ನು ಅನುಸರಿಸಲು ಪ್ರಯಾಸ ಪಡಬೇಕಾಗುತ್ತದೆ. ತನ್ನ ವ್ಯಕ್ತಿತ್ವಕ್ಕೆ, ಸ್ವಭಾವಕ್ಕೆ ಹೊಂದಲಾರದ ರೀತಿಯಲ್ಲಿ ಬದುಕಬೇಕಾಗುತ್ತದೆ. ಈ ದೃಷ್ಟಿಯಿಂದ ಸ್ತ್ರೀ ವಿಮೋಚನಾ ಚಳುವಳಿಯು ಸ್ತ್ರೀ ವಿಮೋಚನೆಯಲ್ಲಿ ಪುರುಷ ವಿಮೋಚನೆಯೂ ಇದೆ ಎಂಬುದಾಗಿ ನಂಬುತ್ತದೆ. ಸ್ತ್ರೀ-ಪುರುಷರಿಬ್ಬರೂ ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಪರಸ್ಪರ ಗೌರವದೊಂದಿಗೆ ಸಹಬಾಳ್ವೆ ಮಾಡಲು ಈ ಚಳುವಳಿ ಅನುವುಮಾಡಿಕೊಡುತ್ತದೆಂದು ತಿಳಿಯಲಾಗಿದೆ.

*- ಡಾ. ಚಂದ್ರಮತಿ ಸೋಂದಾ*

*(ಮೈಸೂರು ಆಕಾಶವಾಣಿ ಕೃಪೆಯಿಂದ)*

## ಆಸರೆ

ಕನಕಪುರದ ಹಾರೋಹಳ್ಳಿಯಲ್ಲಿ ದುಡಿಯಲು ಹೋಗುವ ಹೆಂಗಸರ ಮಕ್ಕಳಿಗೆ ಸ್ವಚ್ಛ, ಸುರಕ್ಷಿತ ವಾತಾವರಣ ಕಲ್ಪಿಸುವ ಶಿಶುಕೇಂದ್ರವಾಗಿ 'ಆಸರೆ' 1992ರಲ್ಲಿ ಪ್ರಾರಂಭವಾಯ್ತು. 2ರಿಂದ 6 ವರ್ಷದ 300 ಮಕ್ಕಳಿರುವ 13 ಕೇಂದ್ರಗಳನ್ನು ಆಸರೆ ನಡೆಸುತ್ತಿದೆ. ಆಸರೆಯ ಹಿಂದಿನ ಮುಖ್ಯ ರೂವಾರಿ ಶ್ರೀಮತಿ ನಾಗರತ್ನ. ಕೆನರಾ ಬ್ಯಾಂಕಿನ ಗ್ರಾಮೀಣ ಮಹಿಳಾ ಸ್ವ ಉದ್ಯೋಗ ತರಬೇತಿ ಸಂಸ್ಥೆಯಲ್ಲಿ ನಾಗರತ್ನ ಅವರು ಕೆಲಸ ಮಾಡುತ್ತಿದ್ದರು. ಮಕ್ಕಳನ್ನು ನೋಡಿಕೊಳ್ಳುವ ಕಾರಣದಿಂದ ಮಹಿಳೆಯರು ತರಬೇತಿ ಕಾರ್ಯಕ್ರಮಗಳಿಗೆ ನಿಯಮಿತವಾಗಿ ಬರುತ್ತಿರಲಿಲ್ಲ. ಎಷ್ಟೋ ಮಹಿಳೆಯರು ಶಾಲೆಗೆ ಹೋಗುವ ದೊಡ್ಡ ಮಕ್ಕಳನ್ನು ಶಾಲೆ ಬಿಡಿಸಿ ಸಣ್ಣ ಮಕ್ಕಳನ್ನು ನೋಡಿಕೊಳ್ಳಲು ಹಚ್ಚುತ್ತಿದ್ದರು. ಮಕ್ಕಳನ್ನು ನೋಡಿಕೊಳ್ಳುವ ವ್ಯವಸ್ಥೆ ಕಲ್ಪಿಸಿದರೆ ಮಹಿಳೆಯರು ತರಬೇತಿಯ ಲಾಭ ಪಡೆಯಬಹುದೆಂಬ ಉದ್ದೇಶದಿಂದ ನಾಗರತ್ನ ಅವರು 'ಆಸರೆ'ಯನ್ನು ತಮ್ಮದೇ ಸ್ವಂತ ಹಣವನ್ನು ಹಾಕಿ ಪ್ರಾರಂಭಿಸಿದರು. ಮುಂದೆ ಹಳ್ಳಿಯವರು ಕೇಂದ್ರಕ್ಕೆ ಕಟ್ಟಡ, ಜಾಗ ನೀಡುವ ಮೂಲಕ 'ಆಸರೆ'ಯನ್ನು ಬೆಂಬಲಿಸಿದರು. CRY (Child Relief & You) ಸಂಸ್ಥೆಯಿಂದ 'ಆಸರೆ'ಗೆ ಸಹಕಾರ ದೊರೆಯುತ್ತಿದೆ

ದೇಶದ ಅನೇಕ ಸಮಸ್ಯೆಗಳಿಗೆ ಧಾರ್ಮಿಕ ಭಿನ್ನಾಭಿಪ್ರಾಯಗಳು ಮುಖ್ಯ ಕಾರಣವಾಗಿದೆಯೆಂದು ನಂಬುವ ಆಸರೆಯಲ್ಲಿ ಯಾವುದೇ ಧಾರ್ಮಿಕ ಆಚರಣೆಗಳಿಲ್ಲ. ಶಾಲೆ ಪ್ರಾರಂಭವಾಗುವುದು ಒಳ್ಳೆಯದನ್ನು ಕುರಿತು 5 ನಿಮಿಷ ಧ್ಯಾನ ಮಾಡುವ ಮೂಲಕ. ಧರ್ಮವನ್ನು ಯಾವುದೇ ರೀತಿಯಲ್ಲಿ Interpret ಮಾಡಬಹುದು. ಯಾವುದೆಂದು ಮಗುವೇ ನಿರ್ಧರಿಸಿಕೊಳ್ಳಲಿ ಎನ್ನುತ್ತಾರೆ ನಾಗರತ್ನ. ಇಂತಹ ನಂಬಿಕೆಯೊಂದಿಗೆ ಪ್ರಾರಂಭವಾದ ಆಸರೆಯೂ ಮಹಿಳೆಯರಿಗೆ ಸ್ವ ಉದ್ಯೋಗದ ಅವಕಾಶ ಕಲ್ಪಿಸುವ ಮಹಿಳೆ ಮತ್ತು ಮಕ್ಕಳ ಬೆಳವಣಿಗೆಗೆ ಸಹಾಯಕವಾಗುವ ಚಟುವಟಿಕೆಗಳನ್ನು ಕಲ್ಪಿಸುವ ಉದ್ದೇಶವನ್ನಿಟ್ಟುಕೊಂಡಿದೆ

ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಒತ್ತು ನೀಡುವ ಉದ್ದೇಶದಿಂದ ತಮ್ಮದೇ ಪಠ್ಯಕ್ರಮವನ್ನು 'ಆಸರೆ' ರೂಪಿಸಿದೆ. ಕನ್ನಡ, ಇಂಗ್ಲೀಷ್ ಎರಡರ ಅಂಕಿಗಳು ಅಕ್ಷರಗಳನ್ನು ಕಲಿಸುವುದಲ್ಲದೆ, ಬಣ್ಣಗಳನ್ನು ಗುರುತಿಸುವುದನ್ನು, ಗಿಡ, ಹಣ್ಣು ತರಕಾರಿಗಳನ್ನು ಗುರುತಿಸುವುದನ್ನು ಕಲಿಸುತ್ತಾರೆ. ಹಾಡು, ನಾಟಕಗಳ ಮೂಲಕವು ಕಲಿಸಲಾಗುತ್ತದೆ. ಮಕ್ಕಳು ಬೇಗನೆ ಸುಸ್ತಾಗುವುದರಿಂದ ವಿಶ್ರಾಂತಿ ನೀಡುವ ಸಲುವಾಗಿ ಶಾಲೆಯಲ್ಲಿ ಮಲಗಿಕೊಳ್ಳುವ ವ್ಯವಸ್ಥೆಯನ್ನು ಮಾಡಿದ್ದಾರೆ. ಕಲಿಕಾ ಸಾಮಗ್ರಿಗಳನ್ನು, ಆಟಿಕೆಗಳನ್ನು ಕಡಿಮೆ ವೆಚ್ಚದಲ್ಲಿ, ಸುತ್ತಲು ಸಿಗುವ ವಸ್ತುಗಳಿಂದಲೆ ಮಕ್ಕಳೊಂದಿಗೆ ತಯಾರಿಸಲಾಗುತ್ತದೆ. ಆಟಕ್ಕೆಂದು ರೂಪಿಸಲಾಗಿದೆ

ಅವಕಾಶಗಳ ಮಿತಿ ಇರುವ ಗ್ರಾಮೀಣ ಮಕ್ಕಳಿಗಾಗಿ ಕೆಲಸ ಮಾಡುವ ಉದ್ದೇಶವಿಟ್ಟುಕೊಂಡಿರುವ 'ಆಸರೆ' ಒಂದು ಉತ್ತಮ ಪ್ರಯತ್ನ.

# ಮಕ್ಕಳು ಏನನ್ನುತ್ತಾರೆ?

ಪ್ರತಿ ವರ್ಷ ನವೆಂಬರ್ 14ರಂದು ಮಕ್ಕಳ ದಿನಾಚರಣೆ ಎಂದು ಆಚರಿಸುವುದು ಒಂದು ರಿಚುಯಲ್ ಆಗಿಬಿಟ್ಟಿದೆ. ಮಕ್ಕಳು ಏನನ್ನು ಬಯಸುತ್ತಾರೆ ಎಂಬುದಕ್ಕಿಂತ ನಮ್ಮ ಬಯಕೆಗಳಿಗೆ ತಕ್ಕಂತೆ ಮಕ್ಕಳನ್ನು ರೂಪಿಸುವುದೆ ನಡೆಯುತ್ತಾ ಬಂದಿದೆ. ಮಕ್ಕಳು ತಮ್ಮ ಸುತ್ತಮುತ್ತಲಿನ ಆಗು ಹೋಗುಗಳಿಗೆ, ತಮ್ಮ ಶಾಲೆ, ಟೀಚರ್, ಅಪ್ಪ-ಅಮ್ಮಂದಿರ ಬಗ್ಗೆ ಏನು ಯೋಚಿಸಬಹುದೆಂಬ ಕುತೂಹಲ ಪುಟಾಣಿಗಳ ಒಂದು ಪುಟ್ಟ ಸಭೆಗೆ ಕಾರಣವಾಯ್ತು. ಕೆಲವು ವಿಷಯಗಳನ್ನು ಕೊಟ್ಟು ನಿಮಗೆ ಯಾವುದು ಬೇಕೋ ಅದನ್ನು ಕುರಿತು ನಿಮಗನಿಸಿದ್ದನ್ನು ಬರೆಯಿರಿ ಎಂದಾಗ ಮಕ್ಕಳು ತಮ್ಮ ಅನಿಸಿಕೆಗಳನ್ನು ಬರೆದರು. ಮಕ್ಕಳ ಅನಿಸಿಕೆಗಳನ್ನು 'ಮಾನಸ' ಓದುಗರೊಂದಿಗೆ ಹಂಚಿಕೊಳ್ಳಲೆಂದು ಪ್ರಕಟಿಸುತ್ತಿದ್ದೇವೆ.

1. ನಮ್ಮ ಅಪ್ಪ ಮತ್ತು ಅಮ್ಮ ಒಳ್ಳೆಯವರು ಇರಬೇಕು, 2. ನಮ್ಮ ಶಾಲೆ ಚೆನ್ನಾಗಿರಬೇಕು, 3. ನನಗೆ TV ಕಂಡರೆ ತುಂಬಾನೆ ಇಷ್ಟ, 4. ನಮ್ಮ ಗುರುಗಳು ಚೆನ್ನಾಗಿ ಇರಬೇಕು, 5. ನನಗೆ ಆಟವೆಂದರೆ ತುಂಬಾ ಪ್ರಾಣ, 6. ನಮ್ಮ ಶಾಲೆಯಲ್ಲಿ ಕಾರ್ಗಿಲ್ ಎಂದು ದುಡ್ಡನ್ನು ತೆಗೆದುಕೊಂಡರು, 7. ಒರಿಸ್ಸಾ ಎಂಬ ಊರಿನಲ್ಲಿ ಜನರು ಮತ್ತು ಪ್ರಾಣಿಗಳು ಕೊಚ್ಚಿಕೊಂಡು ಹೋದರು.

**ಶಾಲೆ**

1. ನನ್ನ ಶಾಲೆಯು ಸ್ವಚ್ಛವಾಗಿರಬೇಕು, 2. ನನ್ನ ಶಾಲೆಯಲ್ಲಿ ಆಟದ ಮೈದಾನವಿರಬೇಕೆಂದು ನನ್ನ ಆಸೆ, 3. ನಾವು ಕಂಪ್ಯೂಟರ್ ಮತ್ತು ಪ್ರಿಂಟರ್ ಜೊತೆಗೆ ನಾವು ದಿನ ಅದನ್ನು ತಗೊಂಡು ಹೋಗಬೇಕೆಂದು ನನ್ನ ಆಸೆ, 4. ದಿನ ನಮ್ಮ ಶಾಲೆಗೆ ಕಲರ್ ಡ್ರೆಸ್ಸನ್ನು ಹಾಕಿಕೊಂಡು ಹೋಗಬೇಕೆಂದು ನನ್ನ ಆಸೆ. 5. ನಮಗೆ ದಿನ ತುಂಬ ಪುಸ್ತಕವನ್ನು ತಗೊಂಡು ಹೋಗ ಬೇಕೆಂದು ನನ್ನ ಆಸೆ.

**ಒರಿಸ್ಸಾ ಪ್ರವಾಹ**

1. ಅವರಿಗೆ ನಾವು ಬಟ್ಟೆಯನ್ನು ಕೊಟ್ಟು ಸತ್ಕರಿಸಬೇಕು, 2. ಅವರಿಗೆ ನಾವು ಮನೆ, ಶಾಲೆ, ಕಚೇರಿ ಮತ್ತು ಕೆಲಸವನ್ನು ಕಟ್ಟಿಸಿ ಕೊಡಬೇಕು, 3. ಅವರಿಗೆ ನಾವು ಊಟ, ತಿಂಡಿ, ನೀರು, ಹಾಲು ಮತ್ತು ಹಣ್ಣುಗಳನ್ನು ಕೊಡಬೇಕು, 4. ನಾವು ಅವರಿಗೆ ಚಪ್ಪಲಿಗಳನ್ನು ಕೊಡಬೇಕು, 5. ನಾವು ಅವರಿಗೆ ಗಡಿಯಾರ, ಒಲೆ, ಕುರ್ಚಿ, ಟೇಬಲ್ ಮತ್ತು ಗಾಡಿಗಳನ್ನು ಕೊಡಬೇಕು.

***Lekha, K.G.***

**Teacher**

Teachers should not be very strict. They should scold us only when we have not done our home work and when we do any mischeavous thing. They should not give us more home work. They should give us notes time to time and they should give us revisions before any tests or exams. After they do the lessons they should make us understand them.

**ಒರಿಸ್ಸಾ ಪ್ರವಾಹ**

ಒರಿಸ್ಸಾದಲ್ಲಿ ಪ್ರವಾಹ ಆದುದರಿಂದ ಅಲ್ಲಿನ ಎಷ್ಟೋ ಜನರು ಸತ್ತು ಹೋಗಿದ್ದಾರೆ. ಅಳಿದುಳಿದ ಜನರ ಮನೆಗಳು ಮುರಿದುಹೋಗಿವೆ. ನಾವು ಅವರಿಗೆ ಬಟ್ಟೆಗಳು, ಹಣ ಕೊಡಬೇಕು. (ಬಟ್ಟೆಗಳು - ಹಳೇದು ಅಥವಾ ನಮಗೆ ಚಿಕ್ಕದಾಗುವಂತಹವು). ಅಲ್ಲಿಯ ಎಷ್ಟೋ ಜನರ ಬಂಧುಗಳು ಇಲ್ಲ, (ಚಿಕ್ಕ ಮಕ್ಕಳಿಗೂ), We should be kind to them.

Thank you

- ವೃದ್ಧಿ

**Kargil War**

Why they do war, Why they use weapons, Why they can not fight in hand.

**School**

They must have entertainment more education, they must not give too much Home Work. They must give little bit of Home Work.

*- ಆಲೋಕ್ ಉತ್ಸವ್*

**ಶಾಲೆ**

ಶಾಲೆಯ ಟೀಚರ್‌ಗಳು-ಮೇಸ್ಟ್ರುಗಳು ಹೊಡೀಬಾರದು. ಅವರು ನಮ್ಮ ಜೊತೆ ಸ್ನೇಹಿತರಾಗಿರಬೇಕು. ನಮಗೆ ಪಾಠ ಜಾಸ್ತಿ ಮಾಡಬಾರದು. ಯಾವಾಗಲೂ ಆಟ ಆಡಲಿಕ್ಕೆ ಬಿಡಬೇಕು.

**ಅಮ್ಮ-ಅಪ್ಪ**

ಅಮ್ಮ-ಅಪ್ಪ ಕೂಡ ಹೊಡೀಬಾರದು, ಬೈಬಾರದು. ನಾನು ತಪ್ಪು ಮಾಡಿದಾಗ ತಿದ್ದಿ ತಿಳಿ ಹೇಳಬೇಕು. ಓದು, ಬರಿ ಎಂದು ಇಡೀ ದಿನ ಕಿರಿಕಿರಿ ಮಾಡಬಾರದು.

**ಕಾರ್ಗಿಲ್ ಯುದ್ಧ**

ಸರ್ಕಾರವು ತಪ್ಪು ಮಾಡಿದೆ. ಯುದ್ಧಕ್ಕೆ ಖರ್ಚು ಮಾಡುವ

*(17ನೇ ಪುಟಕ್ಕೆ ಮುಂದುವರಿದಿದೆ)*

# ಬಡ ಮಕ್ಕಳ ಪಾಲಿಗುಳಿದದ್ದು ಬಾಡಿದ ಗುಲಾಬಿ ಮಾತ್ರ!

- ಲಕ್ಷ್ಮೀಪತಿ, ಕೋಲಾರ

ಹಾಲುಗಲ್ಲದ ಮಕ್ಕಳ ಬಗ್ಗೆ ನೆಹರೂ ಅವರಿಗೆ ಅಮಿತವಾದ ಪ್ರೀತಿ ಇದ್ದದ್ದರಿಂದ ನೆಹರೂ ಜನ್ಮ ದಿನಾಚರಣೆಯನ್ನೇ ಮಕ್ಕಳ ದಿನಾಚರಣೆಯೆಂದು ಆಚರಿಸಲಾಗುತ್ತಿದೆಯೆಂಬ ಅಂಶವೇ ಈ ದೇಶದ ಬಹುದೊಡ್ಡ ವ್ಯಂಗ್ಯ ಮತ್ತು ದುರಂತವಾಗಿದೆ. ಯಾಕೆಂದರೆ ನೆಹರೂ ಅವರಿಗೆ ಮಕ್ಕಳ ಬಗ್ಗೆ ನಿಜವಾದ ಪ್ರೀತಿಯೇ ಇದ್ದಿದ್ದಲ್ಲಿ ಅವರ ಕಾಲದ ಮಕ್ಕಳು ಇಂದು ಕಡುಬಡವರಾಗಿ ಉಳಿಯುವುದು ಸಾಧ್ಯವಿರುತ್ತಿರಲಿಲ್ಲ. ಇಂದಿಗೂ ಬಾಲಜೀತಗಾರರು, ಬಾಲ ಕಾರ್ಮಿಕರು ಉಳಿದುಬರುವುದು ಸಾಧ್ಯವಿರುತ್ತಿರಲಿಲ್ಲ. ವಿಟಮಿನ್ 'ಎ' ಅನ್ನಾಂಗದ ಕೊರತೆಯಿಂದ ವರ್ಷವೊಂದಕ್ಕೆ ಲಕ್ಷಾಂತರ ಮಕ್ಕಳು ಕುರುಡರಾಗಬೇಕಿರಲಿಲ್ಲ. ಅಕ್ಷರಗಳ ಮುಖವನ್ನೇ ಕಾಣದ ಲಕ್ಷ ಲಕ್ಷ ಸ್ಲಂಗಳಲ್ಲಿನ ಹಾಲುಗಲ್ಲದ ಚಿಣ್ಣರು ಸಾಮಾಜಿಕ ಅಪರಾಧಿಗಳಾಗಿ ರೂಪುಗೊಳ್ಳುತ್ತಿರಲಿಲ್ಲ. ಆರೋಗ್ಯಕರವಾದ ಶಿಕ್ಷಣ ಎರಡು ಹೊತ್ತಿನ ಊಟ, ಮೇಲೊಂದು ಸೂರು, ವೈದ್ಯಕೀಯ ನೆರವು, ಅವರ ಪ್ರತಿಭೆಗಳ ವಿಕಾಸಕ್ಕೆ ಅವಕಾಶವೇ ಇರದಂತಹ ಇವತ್ತಿನ ಕ್ಷೋಭೆ ಪೀಡಿತ ಭಾರತ ಹುಟ್ಟುತ್ತಿರಲಿಲ್ಲ.

ನಿಜಕ್ಕೂ ಈ ದೇಶದ ಕೋಟ್ಯಾಂತರ ಹೂಮನಸುಗಳ ಏಳಿಗೆಯರಿಗಾಗಿ ಪಂಡಿತೋತ್ತಮರಾದ ನೆಹರೂ ಏನು ಮಾಡಿದ್ದರು? ನೆಹರೂರವರ ಭಾರತ ವಿದ್ಯೆ ಮಕ್ಕಳನ್ನು ಜಾತಿ ನೀತಿಯಿಂದಾಗಿ ಕಡೆಗಣಿಸಿದಂತೆ ಭವಿಷ್ಯದ ಬಗ್ಗೆ ಭರವಸೆಯಿರುವ ಬೇರೆ ಯಾವ ದೇಶವೂ ಬಹುಶಃ ಕಡೆಗಣಿಸಿರಲಾರದು. ತಮಿಳುನಾಡಿನ ಕಪ್ಪು ಮಕ್ಕಳಿಗೆ ನಿಜವಾದ ಶಿಕ್ಷಣ ದೊರೆತು ಅವರು ಪ್ರತಿಭಾಸಂಪನ್ನರಾಗಿ, ತಮ್ಮ ಸಮಕ್ಕೆ ಬೆಳೆಯುವುದನ್ನು ಸಹಿಸದೆ ಪೆರಿಯಾರ್ ರಾಮಸ್ವಾಮಿ ನಾಯ್ಕರರ ವಿರುದ್ಧವೇ ಚಾಣಕ್ಯ ಪಿತೂರಿ ನಡೆಸಿದ ರಾಜಗೋಪಾಲಾಚಾರಿ ಈ ನೆಹರೂವರ ಅತ್ಯಾಪ್ತ ಮಿತ್ರ. ರಾಜಾಜಿಯವರ ಈ ದೇಶ ದ್ರೋಹಕ್ಕೆ ನೆಹರೂ ಅವರಿಗೆ ಪ್ರತ್ಯುಪಕಾರವಾಗಿ ನೀಡಿದ ಕಾಣಿಕೆಯೇನು ಗೊತ್ತೇ? ಭಾರತರತ್ನ ಎಂಬ ಬಿರುದು!

ಮಕ್ಕಳನ್ನು ನೆಹರೂ ಪ್ರೀತಿಸುತ್ತಿದ್ದರೆಂದು ಇಂದಿಗೂ ವಾದಿಸುವ ನೆಹರೂವಾದಿಗಳು ದಯವಿಟ್ಟು ಗಮನಿಸಬೇಕು. ಈ ದೇಶದ ಕೋಟಿ ಕೋಟಿ ಬಡಮಕ್ಕಳು ಇಂದಿಗೂ ಉತ್ತಮ ಶಿಕ್ಷಣ ದೊರೆಯದೆ ನಾಗರೀಕ ಬದುಕಿನಿಂದ ವಂಚಿತರಾಗುತ್ತಿದ್ದಾರೆ. ಅಷ್ಟೇ ಅಲ್ಲ, ಉತ್ತಮ ಶಿಕ್ಷಣವೆನ್ನುವುದು ಅತ್ಯಂತ ದುಬಾರಿಯಾಗಿ, ಐಷಾರಾಮದ ವಿಷಯವಾಗಿ ಬಡ ಮಕ್ಕಳ ಪಾಲಿಗದು ಗಗನಕುಸುಮವಾಗಿದೆ.

ಬದಲಿಗೆ ಇಲ್ಲಿ ಶ್ರೀಮಂತರ ಮಕ್ಕಳಿಗೆ ಉಚ್ಚಮಟ್ಟದ ವಿದ್ಯಾಭ್ಯಾಸ ದೊರೆಯುತ್ತಿದೆ. ಈ ದೇಶದ ಶಿಕ್ಷಣ ನೀತಿಯ ಅಸಮಾನತೆಗಳಿಂದಾಗಿ ಕುಗ್ರಾಮವೊಂದರ ಕೂಲಿಯ ಮಗ ಭೂಮಾಲೀಕರ ಹಟ್ಟಿಯಲ್ಲಿ ಜೀತ ಸವೆಸುತ್ತಿದ್ದರೆ, ಶ್ರೀಮಂತರ ಹಾಗೂ ಉಚ್ಚ ಜಾತಿಯವರ ಮಕ್ಕಳು ನಗರಗಳ ಕಾನ್ವೆಂಟ್ ಸಂಸ್ಕೃತಿಯಲ್ಲಿ ಅರಳಿ, ಬಡತನದ ಅರಿವೇ ಇಲ್ಲದವರಾಗಿ, ಈ ದೇಶದ ಬಹುಸಂಖ್ಯಾತ ಬಡವರನ್ನು ಆಳುವ, ರಕ್ಷಿಸುವ ಐಎಎಸ್ ಮತ್ತು ಐಪಿಎಸ್‌ಗಳಾಗಿ ಬಂದು ವಕ್ಕರಿಸುತ್ತಿದ್ದಾರೆ. ಯಾವತ್ತಿನ ವರೆಗೂ ಈ ದೇಶದಲ್ಲಿ ಏಕರೂಪ ಶಿಕ್ಷಣ ಪದ್ಧತಿ - ಅಂದರೆ ಡಿಲ್ಲಿಯ ಹಾಗೂ ಹಳ್ಳಿಯ ಮಕ್ಕಳೆಲ್ಲರಿಗೂ ಒಂದೇ ರೀತಿಯ ವಿದ್ಯಾಭ್ಯಾಸ - ದೊರೆಯುವುದಿಲ್ಲವೋ ಅಲ್ಲಿಯವರೆಗೂ ಶಿಕ್ಷಣ ಪದ್ಧತಿಯಲ್ಲಿನ ಈ ಅಸಮಾನತೆಯೇ, ಸಮಾಜದಲ್ಲಿನ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಗಳಾಗಿ ಮುಂದುವರೆಯುತ್ತಿರುತ್ತದೆ. ಈ ವಿಷಮ ವ್ಯವಸ್ಥೆಯಲ್ಲಿ ನೆಹರೂರ ಮಕ್ಕಳ ಪ್ರೀತಿಗೆ ಸ್ಥಾನವಾದರೂ ಎಲ್ಲಿದೆ ಹೇಳಿ? ಇವತ್ತಿನ ಈ ಅಸಮಾನತೆಗೆ ನೆಹರೂ ಈ ದೇಶದ ಚುಕ್ಕಾಣಿ ಹಿಡಿದು ರೂಪಿಸಿದ ಯೋಜನೆ, ನೀತಿಗಳೇ ಬುನಾದಿ ಕಾರಣಗಳಲ್ಲವೇ?

ಪಂಡಿತೋತ್ತಮ ನೆಹರೂ ರೂಪಿಸಿದ ಈ ವ್ಯವಸ್ಥೆ ಕನಿಷ್ಠ ನಿರ್ಗತಿಕರ ಮಕ್ಕಳಿಗೆ ಕಣ್ಣು ಕೂಡ ಬಿಟ್ಟು ಕೊಡಲಾರದಷ್ಟು ನಿರ್ದಯಿಯಾಗಿದೆ. ಚಂದಮಾಮನ ಕನಸು ಕಾಣುತ್ತ, ಓದಿ, ಆಡಿ, ನಲಿಯಬೇಕಾದ ವಯಸ್ಸಿನಲ್ಲಿ, ಅಮ್ಮನ ಅಕ್ಕರೆಯ ಮಡಿಲಿನಲ್ಲಿ ನಿದ್ರಿಸಬೇಕಾದ ಹಾಲುಗೆನ್ನೆಯ ಹಸುಳೆಗಳು ಹೋಟೆಲಿನಲ್ಲಿ ಎಂಜಲು ತೊಳೆಯುತ್ತಲೋ, ಕಲ್ಲು-ಇಟ್ಟಿಗೆ ಹೊರುತ್ತಲೋ, ಬೋಲ್ಟು-ನೆಟ್ಟು ತಿರುವುತ್ತಲೋ, ಕುರಿ-ದನ ಕಾಯುತ್ತಲೋ, ಹೊಲಗದ್ದೆಗಳಲ್ಲಿ ಮಣ್ಣು ತುಳಿಯುತ್ತಲೋ, ಸಣ್ಣ ವಯಸ್ಸಿಗೇ ದುರ್ಭರ ಬದುಕಿನ ನೊಗ ಹೊರುವುದು ಭವ್ಯ ಭಾರತ ದೇಶದ ಸಂಸ್ಕೃತಿಯ ಅತ್ಯಂತ ಅಮಾನುಷ ಕೊಡುಗೆಗಳಾಗಿವೆ. ಲಕ್ಷಾಂತರ ಪುಟಾಣಿಗಳು ತುತ್ತಿನ ಚೀಲಕ್ಕಾಗಿ, ಬಿಸಿಲು, ಮಳೆ, ಚಳಿಗಳಲ್ಲಿ ಕೋಮಲ ದೇಹಗಳನ್ನು ದಂಡಿಸುತ್ತಿರುವಾಗ ಕಂಪ್ಯೂಟರ್ ಯುಗದ 21ನೇ ಶತಮಾನದ ಮಾತುಗಳನ್ನಾಡುವುದು ಶುದ್ಧ ಸೋಗಲಾಡಿತನವಾಗುತ್ತದೆ. ಕೇವಲ ಆತ್ಮವಂಚನೆಯಾಗುತ್ತದೆ. ಮಕ್ಕಳನ್ನು ಕೂಡ ವಂಚಿಸುವ ಎಂತಹ ಸುಳ್ಳಿನ ಬದುಕಾಗಿಬಿಟ್ಟಿದೆ ನಮ್ಮದು?!

ಹೃದಯವನ್ನು ವಿಸ್ತಾರಗೊಳಿಸುವುದೇ ವಿದ್ಯೆಯ ಪರಮೋದ್ದೇಶ, ಆದರೆ ಪ್ರೀತಿ, ಅಂತಃಕರಣಗಳೇ ಇಲ್ಲದ ನಮ್ಮ ಶಿಕ್ಷಣ ತಜ್ಞರಿಂದ ರೂಪಿಸಲ್ಪಟ್ಟ ಇಂದಿನ ವಿದ್ಯೆ ಸೃಜನಶೀಲವೂ ಆರೋಗ್ಯಕರವೂ ಆದ ಮನಸುಗಳನ್ನು ಸೃಷ್ಟಿಸುವುದರ ಬದಲು ಇಂದಿನ ಯಂತ್ರ ನಾಗರೀಕತೆಗೆ ಅಗತ್ಯವಾದ ಜೀವನ ಯಂತ್ರಗಳನ್ನಷ್ಟೆ ಸೃಷ್ಟಿಸುತ್ತಿದೆ. ಈಗಂತೂ ನಿರುದ್ಯೋಗಿಗಳ ದೊಡ್ಡ ಪಡೆಯನ್ನೇ ನಿರ್ಮಿಸಿ, ಸಮಾಜಕ್ಕೆ ಹೊರೆ ಹೊರೆಸುತ್ತಿರುವುದ

ರೊಂದಿಗೆ, ಅಪರಾಧಿಗಳ ಸಂಖ್ಯೆ ಬೆಳೆಸುತ್ತಿದೆ. ವಿದ್ಯಾರ್ಥಿಯ ಪ್ರತಿಭೆಯ ಹಿಂದೆ ಆತನ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳೂ ಕೂಡ ಪರಿಣಾಮಕಾರೀ ಪಾತ್ರ ನಿರ್ವಹಿಸುತ್ತವೆಂಬ ಸಾಮಾನ್ಯ ಸಂಗತಿ ಕೂಡ ಈ ಶಿಕ್ಷಣ ತಜ್ಞರೆನಿಸಿಕೊಂಡ ಪ್ರಭೃತಿಗಳಿಗೆ ತಿಳಿಯದಿರುವುದು ಅತ್ಯಾಶ್ಚರ್ಯಕರವಾಗಿದೆ. ಈ ದೇಶದ ಬೆನ್ನೆಲುಬಾದ ಕೃಷಿ ಕಾರ್ಮಿಕ. ಕಟ್ಟಡ, ಅಣೆಕಟ್ಟು ನಿರ್ಮಿಸುವ ಕೂಲಿಜನರ ಹಾಗೂ ಮಹಿಳೆಯರ ಬಗ್ಗೆ ಅವಹೇಳನಕಾರೀ ಅಂಶಗಳು ನಮ್ಮ ಪಠ್ಯ ಪುಸ್ತಕಗಳಲ್ಲಿ ತುಂಬಿಹೋಗಿವೆ. ಪ್ರಾಥಮಿಕ ಶಿಕ್ಷಣಕ್ಕಾಗಿ ನಾವು ಖರ್ಚು ಮಾಡುತ್ತಿರುವ ಹಣವಂತೂ ಅತೀ ಅಲ್ಪವೆಂಬ ಅಂಶವೇ ಶಿಕ್ಷಣದ ಬಗೆಗಿನ ನಮ್ಮ ಅಸೀಮ ಅಸಡ್ಡೆಗೆ ಸಾಕ್ಷಿಯಾಗಿದೆ.

ಇಂಗ್ಲಿಷ್ ಮಾಧ್ಯಮದ ಶಾಲೆಗಳಂತೂ ಸಾಮಾಜಿಕ ಅಸಮಾನತೆಯ ಬುನಾದಿಗಳಂತಿವೆ. ಶಿಕ್ಷಣ ವ್ಯಾಪಾರವಲ್ಲವೆಂದು ಈ ದೇಶದ ದರಿದ್ರ ಮೂರ್ಖರಿಗೆ ತಿಳಿಹೇಳಬೇಕು. ಭಾರತೀಯ ಶಾಲಾ ಬಾಲಕ/ಬಾಲಕಿಯರ ಬುದ್ಧಿ, ದೇಹ, ಮನಸ್ಸು, ಪ್ರತಿಭೆಗಳನ್ನು ಇಂಗ್ಲಿಷಿನ ಅಮಾನುಷ ಹೊರೆಯಿಂದ ರಕ್ಷಿಸಬೇಕೆಂದು ಹೇಳಿರುವ ಡಾ. ರಾಮಮನೋಹರ ಲೋಹಿಯಾ ಅವರ ಮಾತು ಅಕ್ಷರಶಃ ನಿಜವೆಂಬುದನ್ನು ಎಲ್ಲರೂ ಮನಗಾಣಬೇಕು. ಭಾರತದ ಬಹುಭಾಷಾ ಸಾಮಾಜಿಕ ಸಂದರ್ಭದಲ್ಲಿ ಇಂಗ್ಲಿಷ್ ಎನ್ನುವುದು ಬಂದೂಕು ನಳಿಗೆಗಿಂತಲೂ ಕ್ರೂರವೆಂಬುದನ್ನು ಸೂಕ್ಷ್ಮಮತಿಗಳು ಅರಿಯಬೇಕು. ಜವಾನನ ಮಗ ಕಾರಕೂನನಾಗಿ, ಜೀತಗಾರನ ಮಗ ಪರಿಹಾರ ಕಾಮಗಾರಿಗಳ ದಿನಗೂಲಿಯಾಗಿ, ಈ ದೇಶದ ದಾರಿದ್ರ್ಯಪೂರಿತ ಬದುಕಿನ ಮಹಾ ಪ್ರವಾಹದಲ್ಲಿ ಎಲ್ಲೋ ಕೊಚ್ಚಿಹೋಗುತ್ತಾರೆ. ಕಾನ್ವೆಂಟ್ ಕೂಸುಗಳು ಬೀಗುತ್ತ, ಅವರಿಗೆ ಮಾತ್ರ ಅನುಕೂಲಕರವಾದ ಶಿಕ್ಷಣ ಪದ್ಧತಿಯಲ್ಲಿ ಐಎಎಸ್, ಐಪಿಎಸ್‌ಗಳಾಗಿ ಈ ದೇಶವನ್ನು ವಿವೇಕವಿಲ್ಲದಂತೆ ಆಳತೊಡಗುತ್ತಾರೆ. ಇಲ್ಲಿ ನೆಹರೂ ಎಲ್ಲಿದ್ದಾರೆ?

ಈ ಇಂಗ್ಲಿಷ್ ವಿದ್ಯಾಭ್ಯಾಸದಿಂದಾಗಿ ಕನ್ನಡ ಮತ್ತಿತರ ಜನ ಭಾಷೆಗಳು ಸಂಕೋಚದಿಂದ ಕುಗ್ಗಿ ಹೋಗುವಾಗ, ಇಂಗ್ಲಿಷ್ ಗತ್ತಿನಿಂದ ಆಜ್ಞಾಪಿಸುತ್ತ ಬಹುಸಂಖ್ಯಾತರ ಬದುಕಿಗೆ ಕಾಣದ ಗುಲಾಮ ಸಂಕೋಲೆಗಳನ್ನು ಬಿಗಿಯುತ್ತದೆ. ಹೀಗೆ ನಮ್ಮನ್ನಾಳುವ ವರ್ಗಗಳ ಕೈಯಲ್ಲಿ ಇಷ್ಟೇ ಎಂದು ಹೇಳಲಿಕ್ಕಾಗದ ಶಕ್ತಿಯ ಮೂರು ಆಯುಧಗಳಿವೆ. ಒಂದು ಜಾತಿ, ಎರಡನೆಯದು ಶ್ರೀಮಂತಿಕೆಯನ್ನು ರಕ್ಷಿಸುವ ಕೋವಿ, ಮೂರನೆಯದು ಇಂಗ್ಲಿಷ್. ಆದರೆ ನಾವು ನೆನಪಿಡಬೇಕು. ಅನ್ನ ಬೆಳೆದು ಕೊಡುವ ಒರಟು ಹಳ್ಳಿಯ ಜನಪದರೇ ಫಲವತ್ತಾದ ಭಾಷೆಗಳನ್ನು ಸೃಷ್ಟಿಸಿದವರು ಕೂಡ.

ಎಷ್ಟೋ ಬುಡಕಟ್ಟುಗಳಲ್ಲಿ, ಹಿಂದುಳಿದ ಜಾತಿಗಳಲ್ಲಿ ಹುಟ್ಟುತ್ತಿದ್ದಂತೆಯೇ ಹೆಣ್ಣುಮಕ್ಕಳನ್ನು ವರದಕ್ಷಿಣೆಗೆ ಹೆದರಿ, ಪೋಷಿಸಲಾರದ ಅಸಹಾಯಕತೆಯಿಂದಾಗಿ ಕೊಲೆ ಮಾಡಲಾಗುತ್ತಿದೆ. ಗಂಡುಮಕ್ಕಳು ಶೇ. 28ರಷ್ಟು ಆಹಾರದ ಕೊರತೆಯಿಂದ ನರಳಿದರೆ ಶೇ. 71ರಷ್ಟು ಹೆಣ್ಣುಮಕ್ಕಳು ಇದಕ್ಕೆ ಬಲಿಯಾಗುತ್ತಿದ್ದಾರೆ. ಶೇ. 50ರಷ್ಟು ಗಂಡುಮಕ್ಕಳು ಶಿಕ್ಷಣ ಪಡೆದರೆ, ಹೆಣ್ಣುಮಕ್ಕಳಲ್ಲಿ ಅದು ಅರ್ಧಕ್ಕಿಂತ ಕಡಿಮೆಯೇ ಎನ್ನಬಹುದು. ಕಣ್ಬಿಡುವ ಮೊದಲೇ ಕೊಲೆಯಾಗುವ ಹೆಣ್ಣು ಮಕ್ಕಳ ಯಾವ ಸಮಸ್ಯೆಯನ್ನು ಈ ವ್ಯವಸ್ಥೆ ಪರಿಹರಿಸಿದೆ? ಸಾರ್ವಜನಿಕ ಸ್ಥಳಗಳಲ್ಲಿ ಶೌಚದ ವ್ಯವಸ್ಥೆಯನ್ನು ಕೂಡ ಮಾಡಲಾರದಷ್ಟು ಲಜ್ಜೆಗೇಡಿಯಾಗಿದೆ ಈ ಸಮಾಜ.

ಒಟ್ಟಾರೆಯಾಗಿ ಪ್ರಪಂಚದಲ್ಲಿ ಸುಮಾರು ಒಂದೂವರೆ ಕೋಟಿ ಮಕ್ಕಳು ಹಸಿವು ಮತ್ತು ರೋಗರುಜಿನಗಳಿಂದ ಸಾಯುತ್ತಿವೆ ಆದರೆ ನಾವು ತಯಾರಿಸುವ ಒಂದೊಂದು ಬಂದೂಕು, ಕ್ಷಿಪಣಿ, ಬಾಂಬುಗಳು ಕಟ್ಟಕಡೆಗೆ ಪ್ರತಿಬಿಂಬಿಸುವುದು ಹಸಿವು, ಅರೆಹೊಟ್ಟೆಯಿಂದ ನರಳುತ್ತಿರುವ ಹಸುಳೆಗಳಿಂದ ಕಸಿದುಕೊಂಡ ಅನ್ನವನ್ನು, ವಿದ್ಯೆಯನ್ನು ಮತ್ತು ಅವರ ಹೊದಿಕೆಗಳನ್ನು ಮಾತ್ರ. ಪರಿಸ್ಥಿತಿ ಹೀಗಿರುವಾಗ ಪ್ರತೀ ವರ್ಷ ತಿಥಿಯಂತೆ ಬಂದು ಹೋಗುವ ಈ ಬೂಟಾಟಿಕೆಯ ಮಕ್ಕಳ ದಿನಾಚರಣೆಗೆ ಏನಾದರೂ ಅರ್ಥ ಉಳಿದಿದೆಯೇ? ದುರಂತವೆಂದರೆ ಇನ್ನೂ ಮುಂದುವರೆಯುತ್ತಲೇ ಇರುವ ನೆಹರೂ ಸಂಸ್ಕೃತಿಯ ಆತ್ಮವಂಚಕತನ, ಬೂಟಾಟಿಕೆ, ಮಕ್ಕಳನ್ನು ಅನಾಥರನ್ನಾಗಿಸುವ ಯಾವ ಸಂಸ್ಕೃತಿಯೂ ಭವ್ಯ ನಾಗರೀಕತೆಯನ್ನು ಎಂದೆಂದಿಗೂ ಕಟ್ಟಲಾರದು.

*ಕೃಪೆ : 'ಸಂಚಿಕೆ', ಮೂಡಲ ಸೀಮೆಯ ದಿನಪತ್ರಿಕೆ, 14-11-1998*

---

*15ನೇ ಪುಟದಿಂದ ಮುಂದುವರಿದಿದೆ*

ಹಣದಲ್ಲಿ ಶಾಲೆ, ಕಾಲೇಜು ಕಟ್ಟಿಸಬಹುದಿತ್ತು. ಬಡ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಆ ಹಣವನ್ನು ಉಪಯೋಗಿಸಬಹುದಿತ್ತು. ಇನ್ನು ಮುಂದಕ್ಕೆ ಯುದ್ಧ ಬೇಡವೇ ಬೇಡ.

**ಒರಿಸ್ಸಾ ಚಂಡಮಾರುತ**

ಒರಿಸ್ಸಾದ ಚಂಡಮಾರುತವು ಒಂದು ಪ್ರಕೃತಿ ವಿಕೋಪವಾದ್ದರಿಂದ, ಅದನ್ನು ಯಾರು ತಡೆಯಲಾಗುವುದಿಲ್ಲ. ಚಂಡಮಾರುತ ಆಗುತ್ತದೆ ಎಂದು ಗೊತ್ತಿದ್ದರೂ ಒರಿಸ್ಸಾ ರಾಜ್ಯ ಸರ್ಕಾರವು ಜನರನ್ನು ಸುರಕ್ಷಿತ ಸ್ಥಳಕ್ಕೆ ವರ್ಗಾಯಿಸಲಿಲ್ಲ. ಒರಿಸ್ಸಾ ಸರ್ಕಾರವು ತಪ್ಪು ಮಾಡಿದೆ. ಅಲ್ಲಿ ನಮ್ಮಂಥಹ ಎಷ್ಟೋ ಮಕ್ಕಳು ತಬ್ಬಲಿಗಳಾಗಿದ್ದಾರೆ. ಅಲ್ಲಿ ದನಕರುಗಳು ಮತ್ತು ಇತರ ಪ್ರಾಣಿಗಳು ಸತ್ತು ಕೊಳೆತಿವೆ. ಆದ್ದರಿಂದ ಅಲ್ಲಿ ಸಾಂಕ್ರಾಮಿಕ ರೋಗಗಳು ಹರಡುತ್ತಿವೆ ಮತ್ತು ಬದುಕಿ ಉಳಿದವರಿಗಾಗಿ ನಾವೆಲ್ಲರು ಸಹಾಯ ಮಾಡಬೇಕು, ನಮ್ಮ ಊರಿನಲ್ಲಿ ನನ್ನ ಅಪ್ಪ, ಅಮ್ಮ ಮತ್ತು ಊರಿನ ನಾಗರೀಕರ ಜೊತೆ ನಾನು ಸೇರಿ ಒರಿಸ್ಸಾ ಸಂತ್ರಸ್ತರಿಗಾಗಿ ಹಣ, ಅಕ್ಕಿ, ಪಾತ್ರೆ ಹಾಗೂ ಬಟ್ಟೆಯನ್ನು ಸಂಗ್ರಹಿಸಿದೆವು.

*ಪ್ರಕೃತಿ ಕಲ್ಯಾಣ್‌ಪುರ್*

# ಸಮುದ್ರದ ಮನೆ

ಒಂದ್ಸಲ ಲೇಖ ಅಪ್ಪನ ಜೊತೆ ಮದ್ರಾಸಿಗೆ ಹೋದ್ಲು. ಅಲ್ಲಿ Snake Park ಮತ್ತೆ ಸಮುದ್ರದ ತೀರ - ಎಲ್ಲ ನೋಡಿ ಖುಷಿಪಟ್ಲು.

Snake Parkನಲ್ಲಂತು ಥರಾವರಿ ಹಾವುಗಳು. ಬುಸ್ ಅಂತ ಹೆಡೆ ಎತ್ತಿ ನಿಲ್ಲುವ ಕಾಳಿಂಗ ಸರ್ಪ ಇತ್ತು. ಅದರ ಮೈಬಣ್ಣ ಕಪ್ಪಗೆ ಮಿರಿ ಮಿರಿ ಮಿಂಚ್‌ತಿತ್ತು. ಸುಯ್ ಎಂದು ನೀರಿನಲ್ಲಿ ಈಜೊ ಕೆರೆ ಹಾವು, ಎಲೆ ಮಧ್ಯದಲ್ಲಿ ಸೇರ್ಕೊಂಡೆ ಗುರ್ತೆ ಹಿಡಿಯೋಕ್ ಆಗಲ್ಲ ಅಂತ ಹಸಿರು ಹಾವು ಇತ್ತು. ಇದಲ್ದೆ ಕೋಳಿ ನುಂಗಿ ಹೊಟ್ಟೆ ಉಬ್ಬಿಸಿಕೊಂಡು, ಸುರಳಿ ಸುತ್ತಿ ಮಲಗಿದ್ದ ಹೆಬ್ಬಾವು ಇತ್ತು. ಅದೆಷ್ಟ್ ದಪ್ಪ, ಅಧೆಷ್ಟ್ ಉದ್ದ ಇತ್ತು, ಮೈಮೇಲೆಲ್ಲಾ ಚಿತ್ರ ಬರ್‌ದಿರೋ ಹಂಗೆ ಮಚ್ಚೆಗಳು. ಹಾವ್‌ಗಳ್‌ನೆಲ್ಲ ನೋಡಿ ಆದ್ಮೇಲೆ ಲೇಖಾ ಸಮುದ್ರದ್‌ತೀರಕ್ ಹೋದ್ಲು.

ಸಮುದ್ರ! ಎ......ಷ್ಟ್ ದೊಡ್ಡದು. ಒಂದ್ಸಲ ನೀಲಿ ಬಣ್ಣದಂಗೆ ಕಂಡ್ರೆ, ಇನ್ನೊಂದ್‌ಸಲ ಹಸ್ರು ಬಣ್ಣ ಕಾಣುತ್ತೆ, ಒಂದ್ ಸರ್ತಿ ಕಪ್ ಬಣ್ಣ ಕಾಣುತ್ತೆ. ಅಲೆಗಳು ಕುಣ್ದು ಕುಣ್ದು ಬರ್‍ತಾ ಇದ್ರೆ ಇವಳ್‌ಗು ಕುಣಿಬೇಕು ಅನ್‌ಸ್ತು. ಹತ್ರ ಹೋಗಿ ನಿಂತ್ಕೊಂಡ್ಲು. ಒಂದು ದೊಡ್ಡ ಅಲೆ ಬಂದು ಗುದ್ದ್ ಕೊಟ್ಟು ಹೋಯ್ತು, ಕಾಲಡಿ ಮರಳು ಸರ್ರ್ ಅಂತ ಜಾರ್‍ತು! ಲೇಖ ದೊಪ್ ಅಂತ ಬಿದ್ಲು. ಮಜ ಅನ್‌ಸ್ತು. ಮತ್ತೆ ನಿಂತ್ಕೊಂಡ್ಲು. ಮತ್ತೆ ಅಲೆ ಬಂದು ಗುದ್ದ್ ಕೊಟ್ ಹೋಯ್ತು, ಮತ್ತೇ.....ಬಿದ್ಲು, ಹೀ...ಗೆ ಎಷ್ಟೋ ಹೊತ್ತು ನೀರಲ್ಲಿ ಲೇಖ ಆಡಿದ್ಲು.

ಆಮೇಲೆ ಲೇಖಂಗೆ ಅನ್ನಿಸ್ತು - ಅಯ್ಯೋ ಇಷ್ಟ್ ದೊಡ್ಡ್ ಸಮುದ್ರಕ್ಕೆ ಒಂದ್ ಮನೇನೆ ಇಲ್ವಲ್ಲ ಅಂದ್ಕೊಂಡ್ಲು. ಅಪ್ಪನ್ನು ಜೊತೇಲಿ ಸೇರಿಸ್ಕೊಂಡ್ ಮರಳಲ್ಲಿ ಚೆನ್ನಾಗಿರೋ ಒಂದ್ ಗೂಡ್ ಕಟ್ಟಿದ್ಲು. ಕಪ್ಪೆ ಚಿಪ್ಪು, ಶಂಖ, ಪುಟಾಣಿ ಕಲ್‌ಗಳಲ್ಲಿ ಗೂಡ್‌ಗೆ ಅಲಂಕಾರ ಮಾಡಿದ್ಲು. ಬಂದ್‌ಗೇಟ್ ಮಾಡಿ, ಮುಂದೆ ಸಮುದ್ರದ ಮನೆ ಅಂತ ಬರ್‍ದಿರೋ ಬಾವ್‌ಟಾ ಇಟ್ಲು. ಎಲ್ಲ ಮುಗೀತು, ದೊ....ಡೊದೊಂದ್ ಅಲೆ ಬಂತ್ತು, ಗೂಡೆಲ್ಲ ಕೊಚ್‌ಕೊಂಡ್ ಹೋಯ್ತು. ಲೇಖಂಗೆ ತುಂಬ ಬೇಜಾರಾಯ್ತು. ಅಪ್ಪ ಅಂದ್ರು - ಮನೆ ಸಮುದ್ರದ್ ತಾನೆ?

ಲೇಖಾ ಅಂದ್ಲು - ಹೌದು ಸಮುದ್ರಕ್ ಅಂತ್ಲೆ ಕಟ್ಟಿದ್ದು.

ಅಪ್ಪ - ಸಮುದ್ರದ್ ಮನೆ, ಸಮುದ್ರ ತಗೊಂಡ್ ಹೋಯ್ತು.

ಲೇಖಾ - ಓ ಹೌದಲ್ವಾ, ಸರಿ ಸರಿ ಬೇಜಾರಿಲ್ಲ ನಂಗೆ.

ಅಪ್ಪ - ಸರಿ, ಆಟ ಸಾಕು ವಾಪಸ್ ಹೋಗೋಣ.

ಲೇಖಾ - ಒಂದ್ನಿಮಿಷ್ ತಡಿ, ಸಮುದ್ರಕ್ಕೊಂದ್ Bye ಹೇಳ್ತಿನಿ. ಸಮುದ್ರದ ಎದ್ರಲ್ಲಿ ನಿಂತ್ಕೊಂಡ್ಲು, ಆಮೇಲೆ ಅವ್ಳಿಗೆ ಅನ್‌ಸ್ತು - ಅಯ್ಯೋ ನಾನೇನೊ ಸಮುದ್ರ ನೋಡ್ದೆ, ಖುಷಿಯಾಗ್ ಆಟ ಆಡ್ದೆ, ನನ್ನ ಫ್ರೆಂಡ್ಸ್ ನೋಡ್ಲಿಲ್‌ವಲ್ಲ ಎನ್ ಮಾಡೋದು.....? ಒಂದ್ ಐಡಿಯಾ ಬಂತು!

ಸಮುದ್ರದ್ ಎದ್ರುಗೆ ನಿಂತ್ಕೊಂಡ್ಲು. ಕಣ್ ಮುಚ್‌ಕೊಂಡು ಕೇಳಿದ್ಲು -

ಸಮುದ್ರ, ಸಮುದ್ರ, ನಾನೇನೊ ನಿನ್ನ ನೋಡ್ದೆ, ನಿಂಜೊತೆ ಆಟ ಆಡ್ದೆ. ಆದ್ರೆ ನನ್ನ ಫ್ರೆಂಡ್ಸೇ ನಿನ್ನ ನೋಡ್ಲಿಲ್ಲ. ಅವರ್‍ನ ನೋಡಿದ್ರೆ ನಿಂಗೂ ಖುಷಿಯಾಗುತ್ತೆ. ಅದಕ್ಕೆ Please ನೀನು ಮೆಲ್ಲ್....ಗ್ ಬಂದು ನನ್ನ ಅಂಗಿ ಜೇಬಲ್ ಕುತ್ಕೊ, ಆಮೇಲೆ ನಮ್ಮೂರಿಗ್ ಕರ್‍ಕೊಂಡ್ ಹೋಗ್ತಿನಿ. ಅಲ್ಲಿ ನಮ್ಮನೆ ಅಂಗಳ್‌ದಲ್ಲಿ ನನ್ನ ಫ್ರೆಂಡ್ಸ್ ಜೊತೇಲಿ ಆಟಾಡ್ದ ಮೇಲೆ ವಾಪಸ್ ಬರ್‌ಬಹ್ದು. ಬಂದ್ರೆ ಎಷ್ಟ್ ಚೆನ್ನಗಿರತ್ ಗೊತ್ತಾ?

ಸಮುದ್ರಕ್ಕು ಮಕ್ಕಳ್ನ ನೋಡೊ ಆಸೆ ಆಯ್ತು. ಲೇಖ ಹೇಳ್ದ ಹಾಗೆ ಹಾಗೂ..... ರಾಗಿ, ಮೆಲ್ಲಗೆ ಅವಳ್ ಜೇಬಲ್ ಬಂದ್ ಕೂತ್ಕೋತು.

ಲೇಖ ಊರಿಗ್ ಬಂದ್ಲು. ಎಲ್ಲ ಫ್ರೆಂಡ್ಸ್‌ನು ಕರ್‌ದ್ಲು. ಆಲೋಕು, ಆದಿ, ಪೃಥ್ವಿ, ದಿಶಾ, ನಿಶಿ, ನಿಖಿ, ವರ್ಷ, ಚೇತನಾ, ಪ್ರತೀಕಾ ಎಲ್ರೂ ಬಂದ್ರು.

ಲೇಖ ಅಂದ್ಲು - ಎಲ್ಲಾರು ಕಣ್ ಮುಚ್ಕಳಿ, ನಿಮ್‌ಗೊಂದ್ ತಮಾಷೆ ತೋರ್‌ಸ್ತಿನಿ.

ಎಲ್ಲ ಮಕ್ಳು ಕಣ್ ಮುಚ್‌ಕಂಡ್ರು.

ಲೇಖ ಮೆಲ್ಲಗೆ, ಸಮುದ್ರಾನ ಈಚೆ ಬಾ ಅಂತ ಕರೆದ್ಲು.

ಸಮುದ್ರ ಭರ್ರ್ ಅಂತ ಈಚೆ ಬಂತು, ಎಲ್ಲ ಮಕ್ಳಿಗು ಮುದ್ದಿಡ್ತು, ಮಕ್ಳ ಬಟ್ಟೆಯೆಲ್ಲ ಒದ್ದೆ!

ಹಾಗೇ..... ನೋಡ್ತಾ ನೋಡ್ತಾ ಸಮುದ್ರ ದೊ.....ಡ್‌ದಾಗ್ತ ಹೋಯ್ತು, ಅಂಗಳಾನು ದೊಡ್‌ದಾಯ್ತು.

ಮಕ್ಳಿಗಂತು ಖುಷಿನೋ ಖುಷಿ.

ಎಲ್ರೂ ಮಜ್‌ವಾಗಿ ನೀರಲ್ಲಿ ಕುಣಿದ್ರು, ಕುಪ್ಪಳ್‌ಸಿದ್ರು, ಬಿದ್ ಒದ್ದಾಡಿದ್ರು, ಮೈಯೆಲ್ಲ ಅಂಟಂಟು, ಬಾಯೆಲ್ಲ ಉಪ್ಪುಪ್ಪು.

ಮರಳಲ್ಲಿ ಕಪ್ಪೆಗೂಡ್ ಕಟ್ಟಿದ್ರು, ಕಪ್ಪೆ ಚಿಪ್ಪು, ಶಂಖ, ನುಣ್ಣನೆ ಕಲ್‌ಗಳು ಎಲ್ಲಾನು ಆರಿಸ್‌ಕೊಂಡ್ರು. ಆಟ ಆಡಿ ಸುಸ್ತಾಯ್ತು, ಹಸಿವೆ ಆಗಿ ಊಟ ಬೇಕೆನ್‌ಸ್ತು. ಎಲ್ಲ ಮಕ್ಳು ಸಮುದ್ರಾನ ಕೇಳಿದ್ರು,

ನಮ್‌ಗೆಲ್ಲ ಹಸಿವೆ ಆಗ್ತಾ ಇದೆ, ನಾವ್ ಹೋಗಿ ಊಟ ಮಾಡಿ ಸ್ವಲ್ಪ ಹೊತ್ ಬಿಟ್ ಬರ್‍ತೀವಿ, ನೀನು ಎಲ್ಲೂ ಹೋಗ್‌ಬೇಡ, ನಮ್ ಜತೇಲೆ ಇರ್‌ಬೇಕು ಆಯ್ತಾ?

ಸಮುದ್ರ ಬಂತು - ನೋಡಿ ಮಕ್ಳಾ ನೀವೆಲ್ಲ ಆಟ್ ಆಡ್, ನಿಮ್ ನಿಮ್ ಮನೆಗ್ ವಾಪ್ಸ್ ಹೋಗ್ತೀರಿ ತಾನೆ?

ಹೊಂ ಹೋಗ್ತೀವಿ?

ಹಾಗೆ ನಾನೂನು ಆಟ ಆದ್ಮೇಲ್ ನನ್ನ ಮನೆಗ್ ಹೋಗ್‌ಬೇಕಲ್ವಾ?

ಹೌದು, ಹೋಗ್‌ಬೇಕು.

ಅದಕ್ಕೆ ನಾನು ಮನೆಗ್ ಹೋಗ್ಬೇಕು. ಇಲ್ಲೆ ಇರೋಕಾಗಲ್ಲ.

ಸರಿ, ಆದ್ರೆ ನಿನ್ನ ಹೆಂಗೆ ಕಳ್ಸೋದು?

ಏನೂ ಯೋಚ್ನೆ ಮಾಡ್‌ಬೇಡಿ. ನನ್ನ ಫ್ರೆಂಡ್ ಸೂರ್ಯನ್ ಶಾಖ ಜಾಸ್ತಿ ಆದಾಗ, ನಾನು ಕಾದು ಆವಿ ಆಗ್ತೀನಿ, ಆವಿ ಆಗಿ ಮೇಲಕ್ ಹೋಗ್ತೀನಿ. ಮೇಲಕ್ಹೋಗಿ ಮೋಡದ್ ತೇರಲ್ಲಿ ಕುತ್ಕೋತೀನಿ, ಮೋಡದ್ ಫ್ರೆಂಡ್ ಗಾಳಿ ಬೀಸ್‌ದಾಗ, ಮೋಡ ತೇಲ್ತಾ ತೇಲ್ತಾ ನಮ್ಮೂರಿಗ್ ಕರ್‍ಕಂಡ್ ಹೋಗುತ್ತೆ, ಅಲ್ಲಿಗ್ ಹೋದ್ಮೇಲೆ ಮಳೆ ಆಗಿ ಸುರಿದು, ಹೊಳೆ ಆಗಿ ಹರಿದು ಮತ್ತೆ ಸಮುದ್ರ ಆಗ್ತೀನಿ.

ಹೌದಾ...... ಅಂತ ಮಕ್ಳು ನೋಡ್ತಾ ಇದ್ರು.

ಹಾಗೆ!.... ಸಮುದ್ರ ಆವಿಯಾಗಿ, ಕಣ್ಣಿಗೆ ಕಾಣ್ದೆ ಹೋಯ್ತು.

ಮಕ್ಳೆಲ್ಲ ಅಯ್ಯೋ, ಎಲ್ಲೂ ಕಾಣಿಸ್ತಾನೆ ಇಲ್ವಲ್ಲ ಅಂತ ನೋಡ್ತಾ ಇದ್ರೆ, ಮೇಲೆ ಮೋಡಗಳು ತೇಲ್ತಾ ಇದ್ವು.

ಓಹೋ ಸಮುದ್ರ ಮೋಡದ್ ತೇರಲ್ ಕುತ್ಕೊಂಡು ಹೋಗ್ತಾ ಇದೆ, ಟಾಟಾ ಮಾಡೋಣ ಅಂತ ಎಲ್ಲ ಮಕ್ಳು ಕೈ ಬೀಸಿದ್ರು.

ಸಮುದ್ರ ನಕ್ತು. ತುಂತುರು ಹನಿ ಬಿತ್ತು.
ಮೋಡ ತೇಲ್ ಹೋಯ್ತು!
ಮಕ್ಳೆಲ್ಲ ಕುಣಿತ ಹಾಡಿದ್ರು
ಬಂತು ನೋಡು ಸೂರ್ಯ
ಸಮುದ್ರದ ನೀರು ಕಾಯ್ತು
ಆವಿಯಾಗಿ ಹೋಯ್ತು
ಮೋಡದ ಮನೇಲ್ ಕೂರ್‍ತು
ಬೀಸ್ತು ನೋಡು ಗಾಳಿ
ತಂತು ನೋಡು ಗಾಳಿ
ಮಳೆ ಆಯ್ತು ಹೊಳೆ
ಎಲ್ಲ ಹೊಳೆ ಸೇರಿ
ಮತ್ತೆ ಆಯ್ತು ಸಮುದ್ರ!

- *ಸರಸ್ವತಿ ದು.*

**ಭಾರತಕ್ಕೆ ಸಂಬಂಧಿಸಿದಂತೆ**

- ಹುಟ್ಟಿದ 1,000 ಮಕ್ಕಳಲ್ಲಿ 79 ಮಕ್ಕಳು ವರ್ಷ ತುಂಬುವುದರೊಳಗೆ ಸಾಯುತ್ತವೆ.
- ಹಾಗು 5 ವರ್ಷ ಮುಗಿಸುವುದರೊಳಗೆ 124 ಮಕ್ಕಳು ಸಾಯುತ್ತವೆ.
- ಚಿಕಿತ್ಸೆಗೆ ಬರುವ ಪ್ರತಿ 100 ಮಕ್ಕಳಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಕೇವಲ 24
- ಭಾರತದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹುಟ್ಟುವ ಮಕ್ಕಳ ಕೇವಲ 16% ಮಕ್ಕಳಿಗೆ ಮಾತ್ರ ವೈದ್ಯಕೀಯ ನೆರವು ದೊರಕುತ್ತವೆ.

# ‘ಚಹರೆ’ ಪುಸ್ತಕ ಬಿಡುಗಡೆ ಕುರಿತು

ದಿನಾಂಕ 1-12-99ರ ಸಂಜೆ ಚಿತ್ರಕಲಾ ಪರಿಷತ್ತಿನಲ್ಲಿ ಇಳಾ ಪ್ರಕಾಶನ ಹಾಗೂ ‘ಮಾನಸ’ದ ಬಳಗದವರು ಎಚ್. ಎಸ್. ಶ್ರೀಮತಿಯವರ ‘ಚಹರೆ’ ವಿಮರ್ಶಾ ಸಂಕಲನದ ಬಿಡುಗಡೆ ಸಮಾರಂಭವನ್ನು ಏರ್ಪಡಿಸಿದ್ದರು. ಡಾ. ಸುಮಿತ್ರಾಬಾಯಿಯವರು ‘ಚಹರೆ’ ಪುಸ್ತಕವನ್ನು ಬಿಡುಗಡೆ ಮಾಡಿದರು. ಡಾ. ಬಸವರಾಜ್ ಕಲ್ಗುಡಿ ಹಾಗೂ ಬರಹಗಾರ್ತಿ ಶ್ರೀಮತಿ ಎಚ್. ಎಸ್. ಶ್ರೀಮತಿಯವರು ಕೂಡಾ ಈ ಸಂದರ್ಭದಲ್ಲಿ ಮಾತನಾಡಿದರು.

‘ಚಹರೆ’ ವಿಮರ್ಶಾ ಸಂಕಲನವನ್ನು ಪ್ರಕಟಿಸಿದ ಇಳಾ ಪ್ರಕಾಶನದ ಪರವಾಗಿ ಮಾತನಾಡಿದ ಡಾ. ವಿಜಯಾರವರು ಇಂತಹ ಪುಸ್ತಕಗಳು ಎಲ್ಲರಿಗೂ ತಲುಪಬೇಕೆಂಬ ಉದ್ದೇಶದಿಂದ ಈ ಪುಸ್ತಕವನ್ನು ಪ್ರಕಟಿಸುವುದಾಗಿ ನುಡಿದರು. ಈ ಸಂಕಲನ ಮಹಿಳಾಪರ ಲೇಖನಗಳನ್ನು ಹೊಂದಿರುವುದಷ್ಟೇ ಅಲ್ಲದೇ ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ಉತ್ತಮ ಲೇಖನಗಳನ್ನು ಬರೆದಿದ್ದಾರೆ ಎಂದರು. ಹಣ ಸಂಪಾದನೆಯ ಉದ್ದೇಶವಿರದೇ ಪುಸ್ತಕಗಳನ್ನು ಜನರಿಗೆ ತಲುಪಿಸುವ ಸಲುವಾಗಿ ಇಳಾ ಪ್ರಕಾಶನ ಅನೇಕ ಪುಸ್ತಕಗಳನ್ನು ಪ್ರಕಟಿಸಿದೆ ಎಂದು ಡಾ. ವಿಜಯಾರವರು ನುಡಿದರು.

‘ಚಹರೆ’ ಕುರಿತು ಮಾತನಾಡಿದ ಡಾ. ಬಸವರಾಜ್ ಕಲ್ಗುಡಿಯವರು ಈ ಸಂಕಲನದಲ್ಲಿ ಭಿನ್ನ ಕಾಲಘಟ್ಟದಲ್ಲಿ ಬರೆದ ಹನ್ನೊಂದು ಲೇಖನಗಳಿದ್ದು, ಅವು ಸ್ತ್ರೀ ಸಮಸ್ಯೆಯನ್ನು ಚರ್ಚಿಸುತ್ತವೆ ಎಂದರು. ಹಾಗೂ ಸ್ತ್ರೀಯರ ಸಾಮಾಜಿಕ ಸಮಸ್ಯೆಯನ್ನು ತಾತ್ವಿಕ ನೆಲೆಯಲ್ಲಿ ಹುಡುಕುವ ಪ್ರಯತ್ನಗಳು ಕಂಡುಬರುತ್ತವೆ ಎಂದರು. ಒಂದು ದಶಕದಲ್ಲಿ ಪುರುಷ ಕೇಂದ್ರಿತ ಚಿಂತನೆಗಳಿಗೆ, ಪುರುಷ ಚಿಂತನೆಯ ಮಾದರಿಗೆ ವಿರುದ್ಧ ಮಾದರಿಯಾದ ಮಹಿಳಾ ಚಿಂತನೆಗಳು ಕಂಡುಬರುತ್ತಿವೆಯಲ್ಲದೇ ಇವು ಪುರುಷ ಚಿಂತನೆಗಳನ್ನು ಭಗ್ನ ಮಾಡುತ್ತವೆ. ಪುರುಷ ಮಾದರಿಯ ಚಿಂತನೆಯ ನಡುವೆ ಈ ಕೃತಿ ಪ್ರಮುಖವಾದುದಾಗಿದೆ. ಚಿಂತನೆಯಲ್ಲಿ ಪಾಶ್ಚಾತ್ಯ ಸ್ತ್ರೀವಾದಿ ಎಳೆಗಳು ಕಂಡುಬಂದರೂ ಕೂಡಾ ‘ಪ್ರತಿ ಶಕ್ತಿ’ಯ ಮಾದರಿಯ ದೇಶೀಯ ನೆಲೆ ಕಂಡ ಪ್ರಯತ್ನಗಳು ‘ಚಹರೆ’ಯಲ್ಲಿ ಸಾಕಷ್ಟು ಇವೆ ಎಂದರು. ಚಿಂತನೆಯ ದಾಟಿ ಪೂರ್ವನಿರ್ಧರಿತವಾದ ನಿಲುವಿನಿಂದ ಪ್ರಾರಂಭವಾಗದೇ ಬದುಕಿನ ವಿವರಗಳಲ್ಲಿ, ಮಧ್ಯಮ ವರ್ಗದ ದುಡಿಯುವ ವರ್ಗದ ಅನುಭವಗಳಲ್ಲಿ ಚಿಂತನೆಗಳನ್ನು ಚರ್ಚೆಗೆ ಒಳಪಡಿಸುತ್ತಾರೆ ಎಂದರು. ಹಾಗಾಗಿ ತಾತ್ವಿಕತೆಯಲ್ಲಿ ಶೋಧನೆಯ ಮಾದರಿ ‘ಚಹರೆ’ಯಲ್ಲಿ ಕಂಡುಬರುತ್ತದೆ ಎಂಬುದಾಗಿ ಡಾ. ಕಲ್ಗುಡಿಯವರು ಅಭಿಪ್ರಾಯಪಟ್ಟರು. ಇವರ ಕೃತಿಯಲ್ಲಿ ಗಂಡು ಶತ್ರು ಎಂಬ ನಿಲುವನ್ನು ವಿರೋಧಿಸುತ್ತಲೇ ಏಣಿ ಹತ್ತುವ ಸಮಾನತೆಯ ಹೋರಾಟವನ್ನು ಪ್ರತಿಪಾದಿಸುತ್ತಾರೆ ಎಂದರು. ಇವರ ಕೃತಿಯಲ್ಲಿ ಪರ್ಯಾಯವಾಗಿ ಕಾಣಿಸಿಕೊಳ್ಳುವ ವಿಚಾರಗಳೆಂದರೆ ಸ್ತ್ರೀವಾದಿ ಚಳುವಳಿ ದೇಹಸ್ಥ ಗುಣಗಳನ್ನು ನಿರಾಕರಣೆ ಮಾಡುತ್ತದೆ. ಆದರೆ ಶ್ರೀಮತಿಯವರು ದೇಹಸ್ಥ ಗುಣದ ನಿರಾಕರಣೆಯನ್ನು ಒಪ್ಪಿಕೊಳ್ಳುವುದಿಲ್ಲ ಎಂದರು. ಸಾಂಸ್ಕೃತಿಕ ಹೋರಾಟದ ಬಗ್ಗೆಯೇ ಇವರಿಗೆ ಕಾಳಜಿ. ಅದರಲ್ಲೂ ನಮ್ಮದೇ ನೆಲೆ ಕಂಡುಕೊಳ್ಳುವ ಬಗ್ಗೆಗಿನ ಕಾಳಜಿ ಇವರಿಗೆ ವಿಶೇಷವಾಗಿರುವುದು ‘ಚಹರೆ’ ಸಂಕಲನದಲ್ಲಿ ಕಂಡುಬರುತ್ತದೆ. ‘ಮಾನವಪರ’ ಕಾಳಜಿಗಳು, Inward-looking ಶೈಲಿ ಈ ಸಂಕಲನದ ವಿಶಿಷ್ಟ ಅಂಶಗಳಾಗಿವೆ ಎಂದು ಬಸವರಾಜ್ ಕಲ್ಗುಡಿಯವರು ನುಡಿದರು.

ನಂತರ ಮಾತನಾಡಿದ ಲೇಖಕಿಯು ಅಂತಸ್ಥವಾದ ಚಿಂತನೆಯಿಂದ ತಮ್ಮ ಬರಹಗಳು ಹುಟ್ಟಿಕೊಂಡಿವೆ ಎಂದರು. ಹೆಣ್ಣಾಗಿ ಹುಟ್ಟಿ ಈ ಸಮಾಜದಲ್ಲಿ ಪಡೆದ ಅನುಭವಗಳನ್ನು ಇನ್ನಿತರರೊಂದಿಗೆ ಹಂಚಿಕೊಳ್ಳಬೇಕೆಂದು ಈ ಲೇಖನಗಳನ್ನು ಬರೆದಿದ್ದೇನೆ ಎಂದು ನುಡಿದರು.

ಕೊನೆಯದಾಗಿ ಮಾತನಾಡಿದ ಡಾ. ಸುಮಿತ್ರಾಬಾಯಿಯವರು ಈ ದಶಕದಲ್ಲಿ ‘ಚಹರೆ’ಯಂತಹ ಸಂಕಲನಗಳು, ವೈಚಾರಿಕ ಚಿಂತನೆಗಳು ಹುಟ್ಟಿಕೊಳ್ಳುತ್ತಿರುವ ಸಂದರ್ಭದ ಹಿನ್ನೆಲೆಯನ್ನು ಕುರಿತು ಮಾತನಾಡಿದರು. 75ರ ದಶಕದ ಮಹಿಳಾ ಚಳುವಳಿ, ಬೆಂಗಳೂರಿನಲ್ಲಿ ‘ವಿಮೋಚನ’, ಮೈಸೂರಿನಲ್ಲಿ ‘ಸಮತಾ’ ಹುಟ್ಟಿ ಮಹಿಳಾ ಧ್ವನಿ ಬಲವಾಗಿ ಚಳುವಳಿಯ ರೂಪದಲ್ಲಿ ಕಾಣಿಸಿಕೊಂಡಿತು. ನಂತರ ಚರಿತ್ರೆಯಲ್ಲಿ ಹುದುಗಿಹೋದ ಮಹಿಳಾ ಲೇಖಕಿಯರ ಸಾಹಿತ್ಯ, ಸಾಧನೆಗಳನ್ನು ಶೋಧಿಸುವುದರ ಮೂಲಕ ಮಹಿಳಾ ಸಮಸ್ಯೆಗಳ ಮೇಲೆ ಬೆಳಕನ್ನು ಚೆಲ್ಲುವ

ಪ್ರಯತ್ನಗಳು 80ರಲ್ಲಿ ನಡೆದವು. ಬಹಿರಂಗವಾಗಿ ಘೋಷಣೆಯನ್ನು ಕೂಗುವವರ ಚರಿತ್ರೆಯನ್ನು ಶೋಧಿಸುವ ಜವಾಬ್ದಾರಿಯನ್ನೂ ಹೊರುವ ಅನಿವಾರ್ಯವಿತ್ತು. ಆದರೆ ಇದನ್ನು ಸಾಂಸ್ಕೃತಿಕ ಚರಿತ್ರೆಯ ಭಾಗ ಎಂದು ನಮ್ಮಲ್ಲಿ ಗುರುತಿಸುತ್ತಲೇ ಇಲ್ಲ ಎಂದರು. ಈ ಇತಿಹಾಸದ ಭಾಗವನ್ನು ಪುರುಷರ ವಿರುದ್ಧ ಸ್ತ್ರೀವಾದಿ ಪ್ರತ್ಯೇಕತೆ ಎಂಬ ರೀತಿಯಲ್ಲಿಯೇ ಗುರುತಿಸಲಾಗಿದೆ ಎಂದರು. 90ರ ದಶಕದಲ್ಲಿ 'ಚಹರೆ' ಬಂದಿದೆ. ಪ್ರಾಯೋಗಿಕ ಅನುಭವದಿಂದ ಸ್ತ್ರೀ ಸಮಸ್ಯೆಯ ಬಹುಮುಖತೆಯ ವಿಶ್ಲೇಷಣೆ ಮಾಡುವ ಶೈಲಿ ಕಂಡುಬರುತ್ತದೆ ಎಂದರು. ಗಂಭೀರ ಚಿಂತನೆಯಿದ್ದರೂ ಓದಿಸಿಕೊಳ್ಳುವ ಆಯಾಮವನ್ನು ಈ ಕೃತಿ ಹೊಂದಿದೆ ಎಂದರು. 90ರ ದಶಕದಲ್ಲಿ ಸ್ತ್ರೀವಾದಿ ಬೌದ್ಧಿಕ ಶಿಸ್ತು ಉದ್ಯೋಗದ ಅರ್ಹತೆಗಳನ್ನು, ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ ಕೇಂದ್ರಗಳಾಗಿ ಬೇರೆ ಬೇರೆ ರೀತಿಯ ಚಳುವಳಿಯೇತರ ಬೌದ್ಧಿಕ ಶಿಸ್ತಾಗಿ ಪರಿಗಣಿತವಾಗಿದೆ ಎಂದರು.

ಮಹಿಳೆ ಯಾವಾಗಲೂ ಸಮಾಜದ 'ಚರಿತ್ರೆ'ಯಲ್ಲಿ ಇದ್ದಾಳೆ. ಪುರುಷನ ಜೊತೆಯಲ್ಲಿಯೇ ಇದ್ದಾಳೆ. ಚರಿತ್ರೆಯ ಯಾವುದೇ ಘಟ್ಟದಲ್ಲಿ ಆಕೆ ಅದೃಶ್ಯಳಾಗಿಲ್ಲ. ಇದನ್ನು ಶ್ರೀಮತಿಯವರು ಗುರುತಿಸುತ್ತಾರೆ ಎಂದರು.

'ದೇಹಸ್ಥ' ನಿರಾಕರಣೆಯ ಬಗ್ಗೆ ಮಾತನಾಡುತ್ತಾ ಸುಮಿತ್ರಾಬಾಯಿಯವರು ಇದನ್ನು ಒಂದು ದೊಡ್ಡ ವಿಚಾರವಾಗಿ ಯಾಕೆ ಮಾಡಲಾಗಿದೆ ಎಂದು ಪ್ರಶ್ನಿಸಿದರು. ಬೇರೆ ಚಳುವಳಿಗೆ ಪ್ರಶ್ನೆಯಾಗದ ಇಂತಹ ವಿಚಾರಗಳು ಮಹಿಳಾ ಚಳುವಳಿಯಲ್ಲಿ ಮಾತ್ರ ಯಾಕೆ ಸಮಸ್ಯೆಯಾಗಿವೆ ಎಂದರು. ಜಾನಪದ, ಅನಕ್ಷರಸ್ಥ, ಮೌಖಿಕವಾದದ್ದನ್ನು ಗುರುತಿಸಿ ಅದರಿಂದ ಸ್ತ್ರೀ ಸಬಲತೆಯನ್ನು ಗುರುತಿಸಬೇಕು, ಸ್ಥಳೀಯ ನೆಲೆಗಳಲ್ಲಿ ಎಲ್ಲಾ ಉತ್ತರಗಳನ್ನು ಕಂಡುಕೊಳ್ಳಬೇಕೆನ್ನುವ ವಿಚಾರ ಎಷ್ಟು ಸರಿ ಎಂದು ಪ್ರಶ್ನಿಸಿದರು.

'ಚಹರೆ' ಭಾವೋದ್ವೇಗವಿಲ್ಲದೇ ವಿಷಯ ಮಂಡಿಸಿದೆ ಎನ್ನುತ್ತಾ ಇವತ್ತಿನ ಸ್ತ್ರೀವಾದದ ಚಿಂತನೆಯ ಗುರಿಯೆಂದರೆ ಪರ್ಯಾಯ ಸಮಾನ ನೆಲೆಯ, ಸಮಾನ ಸೃಷ್ಟಿಯ ಕಡೆಗೆ ಕರೆದೊಯ್ಯುವ ಪ್ರಯತ್ನಗಳನ್ನು ಮಾಡುವುದಾಗಿದೆ ಎಂದರು. ●

## ಅಶರೀರ ಜೀವ

ರೂಪ, ಹಾಸನ

ಹಲವಿಳಿದ ಅಶರೀರ ಹೆಣ್ಣು ಭ್ರೂಣಗಳ ಆಕ್ರಂದನ
ಮಿಡಿವ ಎದೆ ನರಳಿ, ಮಿಕ್ಕವರಿಗೆ ಖಾಲಿ ಮೌನ
ಅಮ್ಮಾ.....ಅಮ್ಮಾ......ಗಾಳಿಯೊಡಲು ಸೀಳಿ
ತೇಲಿ ಬರುವ ನೂರಾರು ಹೆಣ್ಣುಉಲಿ

ಗರ್ಭದೊಳಗೇ ಜೀವ ಅಸ್ಪಷ್ಟರೂಪವಾದಂತೆ
ಕೊಬ್ಬಿದ ಕುರಿಯ ಕಟುಕ ಕಚಕ್ಕನೆ ಕತ್ತರಿಸಿದಂತೆ
ಮೃತ್ಯುರೂಪ ನಿರ್ದಾಕ್ಷಿಣ್ಯದಿ ಜೀವ ತುಂಡರಿಸಿ
ಎದೆಯೊಳಗಿನ ಭಾವಗಳ ನಿಮಿಷಾರ್ಧದಿ ಒರೆಸಿ

ಗಾಜಿನ ಮೇಲೆ ಬಿದ್ದ ಮಳೆಹನಿಯ
ಒರೆಸಿಬಿಡುವ ವೈಪರ್‌ನಕಾಯ

ಪದರು ಪದರಾಗಿ ಹೆಣ್ಣಿನ ಸೃಷ್ಟಿ ವಿಶೇಷ ಕಸದಲ್ಲಿ!
ಮೊಟ್ಟೆ ಮಾಗಿ, ಒಡೆದು ಜೀವವಾಗುವುದೆಲ್ಲಿ?

ಹಸಿಹಸಿ ಮೊಟ್ಟೆ ಕುಡಿದು ಜೀವ ಬಸಿವ
ನರರಾಕ್ಷಸರ ಈ ರುದ್ರತಾಂಡವ!
ಹೆಣ್ಣು ಭ್ರೂಣಗಳು ಹೆಣವಾಗಿ, ಮಣ್ಣಾಗಿ
ಗಂಡು ಭ್ರೂಣಗಳು ಹಣ್ಣಾಗಿ, ಮಾಗಿ

ಜೀವಂತ ಗಂಡು ಜೀವಕ್ಕೆ
ಅಶರೀರ ಹೆಣ್ಣು ಮರೀಚಿಕೆ
ಉತ್ತರವಿಲ್ಲವೇ ಈ ಘೋರಕೆ ಪ್ರಕೃತಿಯೊಳಗೆ?
ಬಹುಶಃ ಕಾಲವೇ ಕ್ರಾಂತಿಮಂತ್ರ ಈ ಇಳೆಗೆ!

# "ಚರಣ್‌ಶಾಳ ಸಾವಿನ ಸುತ್ತ"

ಉತ್ತರ ಪ್ರದೇಶದ ಸತ್ಪುರ ಹಳ್ಳಿಯಲ್ಲಿ ಐವತ್ತು ವರ್ಷದ ಚರಣಶಾಹ ಗಂಡನ ಸಾವಿನ ದುಃಖವನ್ನು ಸಹಿಸಲಾಗದೆ, ಗಂಡನ ಜತೆಯಲ್ಲಿಯೇ ಆತ್ಮಹತ್ಯೆ ಮಾಡಿಕೊಂಡಳು. ಈ ಆತ್ಮಹತ್ಯೆಯ ಘಟನೆಯನ್ನು, ಸಂಪ್ರದಾಯಸ್ಥ ಮನಸ್ಸು ಸತೀ ಪದ್ಧತಿಯ ವೈಭವೀಕರಣಗೊಳಿಸುತ್ತಿರುವುದು ಈ ಶತಮಾನದ ಅಂತ್ಯದಲ್ಲಿ ನಡೆದ ವಿಲಕ್ಷಣ, ವಿಪರ್ಯಾಸ ಘಟನೆಯೆನ್ನಬಹುದು.

ಚರಣಶಾಹಳ ಕುಟುಂಬ ಬಡತನದಲ್ಲಿಯೇ ತೇಲಿದ ಕುಟುಂಬ. ಬಾಲ್ಯದಲ್ಲಿ ಮನ್‌ಶಾಹನನ್ನು ಮದುವೆಯಾಗಿದ್ದಳು. ಅವಳ ಅಣ್ಣನ ಪ್ರಕಾರ "ಮದುವೆಯಾದ ನಂತರ ನನ್ನ ತಂಗಿಗೆ ಗಂಡನ ಕಾಯಿಲೆಯ ವಿಚಾರ ತಿಳಿಯಿತು. ಗಂಡನಿಗಿರುವ ಕಾಯಿಲೆಯ ವಿಷಯ ತಿಳಿದರೂ ಆಕೆಗೆ ಬೇಸರವಾಗಲಿ, ದುಃಖ ವಾಗಲೀ ಆಗಿರಲಿಲ್ಲ." ಮನ್‌ಶಾಹ ಮದುವೆಗೆ ಮೊದಲಿ ನಿಂದಲೇ ಕ್ಷಯ ರೋಗದಿಂದ ನರಳುತ್ತಿದ್ದ. 35 ವರ್ಷಗಳ ಕಾಲ, ಆಕೆ ಆತನ ಸೇವೆಯನ್ನು ಮಾಡುತ್ತಿದ್ದಳು. ಚರಣಶಾಹಳಿಗೆ ಮೂರು ಜನ ಮಕ್ಕಳಿದ್ದರು. ಆಕೆಯ ದೊಡ್ಡ ಮಗ ಕೆಲವು ವರ್ಷಗಳ ಹಿಂದೆ ತೀರಿಕೊಂಡಿದ್ದ.

ನವೆಂಬರ್ 11ರಂದು ದೀರ್ಘಕಾಲದಿಂದ ಹಾಸಿಗೆಯನ್ನು ಹಿಡಿದ ಮನ್‌ಶಾಹ ಬೆಳಿಗ್ಗೆ 4 ಗಂಟೆಗೆ ಮರಣವನ್ನಪ್ಪಿದ. ಅವಳ ಗುಡಿಸಲಿನಿಂದ ಹದಿನೈದು ನಿಮಿಷ ನಡೆಯುವಷ್ಟು ದೂರದಲ್ಲಿ ಆತನ ಶವಸಂಸ್ಕಾರ ಮಾಡಲಾಯಿತು. ಸಂಸ್ಕಾರವನ್ನೂ ಮಾಡಿ ಮುಗಿಸಿ ವಾಪಸ್ಸು ಬಂದು ಸ್ನಾನ ಮಾಡುತ್ತಿದ್ದ ಸಮಯದಲ್ಲಿ ಚರಣಶಾಹ ಓಡಿ ಹೋಗಿ ಉರಿಯುತ್ತಿರುವ ಬೆಂಕಿಯಲ್ಲಿ ಬಿದ್ದಳು.

ಅಣ್ಣ ಮೆಲ್‌ಖಾನ್‌ಸಿಂಗ್‌ನ ಪ್ರಕಾರ ತನ್ನ ತಂಗಿಯು ಗಂಡನನ್ನು ಕಳೆದುಕೊಂಡು ದುಃಖತಪ್ತಳಾಗಿ ತನ್ನ ಮನಸ್ಸಿನ ಮೇಲಿನ ಹಿಡಿತವನ್ನು ಕಳೆದುಕೊಂಡಿದ್ದಳು. ದುಃಖದ ತೀವ್ರತೆಯಲ್ಲಿ ಆಕೆ ಓಡಿ ಹೋಗಿ ಬೆಂಕಿಗೆ ಬಿದ್ದಿದ್ದಾಳೆಯೇ ಹೊರತು, ಇದು ಸತಿ ಸಹಗಮನವಲ್ಲ."ಆತನ ದೃಷ್ಟಿಯಲ್ಲಿ ಸತಿ ಸಹಗಮನವೆಂದರೆ, ವಿಷಯವನ್ನು ಮೊದಲೇ ತಿಳಿಸಿ ಅದಕ್ಕಾಗಿ ಸಿದ್ಧತೆಯನ್ನು ನಡೆಸುವುದು." ಜಿಲ್ಲಾಧಿಕಾರಿಯವರು, ಮನ್‌ಶಾಹಳ ಸಾವನ್ನು ಸತಿ ಸಹಗಮನವೆಂದು ಒಪ್ಪುವುದಿಲ್ಲ. ದುಃಖದಲ್ಲಿ ನೊಂಡ ಆಕೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆಂದು ವರದಿ ನೀಡಲಾಯಿತು.

ಚರಣಶಾಹಳ 'ಸಾವು' ಹಲವಾರು ರೀತಿಯ ವ್ಯಾಖ್ಯಾನಕ್ಕೆ ಒಳಗಾಗಿದೆ. ಸತ್ಪುರದ ಜನರು ಚರಣಶಾಹಳ ಸಾವನ್ನು ಸತಿ ಸಹಗಮನವೆಂದು ವೈಭವೀಕರಿಸಿ "ಸತಿ ಸ್ಥಳವನ್ನು ಪವಿತ್ರ ಸ್ಥಳವನ್ನಾಗಿಸಿ ದರ್ಶನ ನೀಡುತ್ತಿರುವುದು ಒಂದು ಕಡೆಯಾದರೆ, ಭಾರತಕ್ಕೆ ಸ್ವಾತಂತ್ರ್ಯ ಬಂದು ದಶಕಗಳಾದರೂ ಮೂಲಭೂತ ಸೌಲಭ್ಯದಿಂದ ವಂಚಿತವಾದ ಸತ್ಪುರ ಗ್ರಾಮದ ಆರ್ಥಿಕ ಸ್ಥಿತಿಯ ಹಿನ್ನೆಲೆಯಲ್ಲಿ ಈ ಘಟನೆಯನ್ನು ವಿಶ್ಲೇಷಿಲಾಗುತ್ತಿದೆ.

ಬಹುಪಾಲು ಉತ್ತರ ಪ್ರದೇಶದ ಹಿಂದುಳಿದ ಹಳ್ಳಿಗಳ ರೀತಿಯಲ್ಲಿ ಸತ್ಪುರ ಸಹ ಒಂದು ಹಿಂದುಳಿದ ಹಳ್ಳಿ. ನಮ್ಮ ದೇಶ ಸ್ವಾತಂತ್ರ್ಯದ ಸ್ವರ್ಣಮಹೋತ್ಸವವನ್ನು ಆಚರಿಸಿದ್ದರೂ ಈ ಗ್ರಾಮಕ್ಕೆ ಜನರಿಗೆ ಬೇಕಾದ ಪ್ರಾಥಮಿಕ ಸೌಲಭ್ಯಗಳನ್ನು ಸಹ ಒದಗಿಸಲಾಗಿಲ್ಲ. ಜನರಿಗೆ ಆಸ್ಪತ್ರೆಯ ಸೌಲಭ್ಯವಿಲ್ಲ, ಶಾಲೆಗಳಿಲ್ಲ, ಕರೆಂಟ್ ಸಹ ಈ ಗ್ರಾಮಕ್ಕಿಲ್ಲ. ನಾಗರೀಕತೆಯ ಸೋಂಕೆ ಇಲ್ಲದ ಜನ ತಮ್ಮದೇ ಆದ ಸಾಮಾಜಿಕ ಜೀವನ ಶೈಲಿಯನ್ನು ರೂಪಿಸಿಕೊಂಡಿದ್ದಾರೆ. ಈ ಸಾಮಾಜಿಕ ಸ್ಥಿತಿಯಲ್ಲಿ ಚರಣಶಾಹಳ ಆತ್ಮಹತ್ಯೆನ್ನು ಮುಗ್ಧ ಜನರು ಸತಿ ಹೋಗಿದ್ದಾಳೆಂದು ತಮ್ಮ ಧಾರ್ಮಿಕ ಭಾವನೆಯನ್ನು ಆರೋಪಿಸು ತ್ತಿದ್ದಾರೆ. ಈ ಧಾರ್ಮಿಕ ಭಾವನೆ, ಸತೀ ಪದ್ಧತಿಯನ್ನು ಪುನರ್ ಸ್ಥಾಪಿಸುವಂತೆ ಮಾಡದಿದ್ದರೂ, ಜನರಲ್ಲಿಯ ನಂಬಿಕೆ ಹಾಗೂ ಮೌಲ್ಯಗಳನ್ನು ಬಲಪಡಿಸುತ್ತಿದೆ. ಅನಕ್ಷರತೆ, ಬಡತನ, ಬದುಕಲು ಬೇಕಾದ ಕನಿಷ್ಠ ಸೌಲಭ್ಯಗಳ ಕೊರತೆಯು ಜನರನ್ನು ಇಂತಹ ಅತಿರೇಕ ಕೃತ್ಯಗಳಿಗೆ ತಳ್ಳುತ್ತಿದೆಯೆನ್ನುವುದು ನಿಜವಾದರೂ, ಧಾರ್ಮಿಕ ಭಾವನೆಗಳನ್ನು ಬಲಪಡಿಸುತ್ತಿರುವ ಶಕ್ತಿಗಳ ರಾಜಕೀಯ ಸ್ವರೂಪದ ಹಿನ್ನೆಲೆಯಲ್ಲಿ ಈ ಘಟನೆಯು ಬೀರುವ ಪರಿಣಾಮವನ್ನು ಗಮನಿಸಬೇಕಾಗುತ್ತದೆ.

ರೂಪಾಕನ್ವರ್ ಘಟನೆಯಲ್ಲಿ ಕೋಮುವಾದಿ ಪಕ್ಷ ತೆಗೆದುಕೊಂಡ ನಿಲುವು ಇದಕ್ಕೆ ಉತ್ತಮ ನಿದರ್ಶನ. ಕೋಮುವಾದಿ ನಿಲುವು ಅಮಾನುಷವಾದ ಸತೀ ಪದ್ಧತಿಯನ್ನು ಬೆಂಬಲಿಸುತ್ತಿದ್ದದು ಅಪಾಯಕಾರಿ, ಅಷ್ಟೇ ಅಲ್ಲದ್ದೇ, ಸನಾತನ ಮೌಲ್ಯಗಳ ಪುನರ್ ಸ್ಥಾಪನೆಯು ಜೀವವಿರೋಧಿಯಾದುದರಿಂದ ಖಂಡನಾರ್ಹವಾದುದು.

●

# "ಧಾರ್ಮಿಕ ಆತ್ಮಹತ್ಯೆ"

ಸ್ವಾಮಿ ಅಗ್ನಿವೇಶ್

ಐವತ್ತು ವರ್ಷದ ಚರಣಾಶಾಹ 'ಆತ್ಮಹತ್ಯೆ'; ಅದನ್ನು ಸತಿ ಎಂದು ಅರ್ಥೈಸುತ್ತಿರುವುದು ಇಡೀ ರಾಷ್ಟ್ರವೇ ನಾಚಿಕೆ ಪಡುವಂತ ಘಟನೆಯಾಗಿದೆ. ಸನಾತನ ಧರ್ಮವನ್ನು ಎತ್ತಿಹಿಡಿಯುವ ಶಕ್ತಿಗಳು ಈ ಮುಗ್ಧ ಜನರ ಸರಳ ಧಾರ್ಮಿಕ ನಂಬಿಕೆಗಳನ್ನು ಬಂಡವಾಳ ಮಾಡಿಕೊಳ್ಳುತ್ತಿರುವುದು ಮುಜುಗರ ವನ್ನುಂಟು ಮಾಡುವ ಸಂಗತಿಯಾಗಿದೆ.

ಸತಿ ಪದ್ಧತಿಯನ್ನು ಆಚರಿಸುವುದು ಕಾನೂನು ಬಾಹಿರ. ಸೆಕ್ಯೂಲರ್ ಪ್ರಜಾಪ್ರಭುತ್ವದಲ್ಲಿ ಇಂತಹ ಪದ್ಧತಿಯ ಆಚರಣೆ ನಮ್ಮೆಲ್ಲ ಕಾನೂನುಗಳನ್ನು ಗಾಳಿಗೆ ತೂರಿದಂತೆ. ಕಾನೂನು ಪ್ರತಿಯೊಬ್ಬರಿಗೂ ಅನ್ವಯವಾಗಬೇಕು. ಘಟನೆಯು ನಡೆಯಲು ಪೂರಕ ಪಾತ್ರ ವಹಿಸುವವರು ಶಿಕ್ಷೆಗೆ ಒಳಗಾಗಬೇಕು. ಈ ಕರ್ತವ್ಯ ನಿರ್ವಹಣೆಯಲ್ಲಿ ಲೋಪದೋಷ ಕಂಡುಬಂದರೆ ಅದು ರಾಜ್ಯ ತನ್ನ ಕರ್ತವ್ಯವನ್ನು ನಿರ್ವಹಿಸುವಲ್ಲಿ ವಿಫಲವಾಗಿದೆಯೆಂದರ್ಥ.

ನಮ್ಮ ದೇಶದಲ್ಲಿ ವಿಧವೆಯರ ಸ್ಥಿತಿ ಕಳವಳಕಾರಿಯಾದುದು. ಇಂತಹ ಸನ್ನಿವೇಶದಲ್ಲಿ ಚರಣಶಾಹ ಬದುಕುವುದಕ್ಕಿಂತ, ಗಂಡನೊಡನೆ ತಾನು ಸಾಯುವುದು ಲೇಸೆಂದು ನಿರ್ಧರಿಸಿ ಆತ್ಮಹತ್ಯೆ ಮಾಡಿಕೊಂಡಿರುವುದು ಹೃದಯ ವಿದ್ರಾವಕ ಘಟನೆ. ಅವಳ ಗಂಡ ಕ್ಷಯ ರೋಗದಿಂದ ನರಳುತ್ತಿದ್ದು, ದೀರ್ಘಕಾಲದಿಂದ ಹಾಸಿಗೆ ಹಿಡಿದಿದ್ದ. ನಮ್ಮ ದೇಶದ ಕೋಟ್ಯಾಂತರ ಹೆಣ್ಣುಮಕ್ಕಳು ತಮ್ಮ ಗಂಡಂದಿರ, ಕುಟುಂಬಕ್ಕಾಗಿ ತಮ್ಮನ್ನು ತಾವು ಸುಟ್ಟುಕೊಳ್ಳುವಂತೆ, ಚರಣಶಾಹ ಸಹ ಕಾಲು ಶತಮಾನಗಳ ಕಾಲ ಗಂಡನ ಹೊರೆಯನ್ನು ಹೊತ್ತಳು. ಅವಳು ನಿಸ್ವಾರ್ಥದಿಂದ ಗಂಡನ ಸೇವೆ ಮಾಡಿದಳು. ನಿಧಾನವಾದ ಸಾವಿನಿಂದ ಅವನೊಂದು ದೆವ್ವವಾಗಿದ್ದ. ಅವಳು ಆತ್ಮಹತ್ಯೆಯ ನಿರ್ಧಾರ ಕೈಗೊಳ್ಳಲು ಕಾರಣ ಗಂಡನ ಸಾವಿನಿಂದ ಉಂಟಾದ ಆಘಾತಲ್ಲ. ಜೊತೆಗೆ ಅವನನ್ನೇ ಅನ್ನಕ್ಕಾಗಿ ಆಶ್ರಯಿಸಿದ ಭಯವೂ ಅಲ್ಲ, ಅಥವಾ 'ಸತಿ' ಹೋಗಬೇಕೆಂಬ ಆದರ್ಶವೂ ಅಲ್ಲ. ಒಬ್ಬ ದಲಿತ ವಿಧವೆ ಬದುಕಬೇಕಾದ ಸ್ಥಿತಿ.

ಪಿತೃಪ್ರಧಾನ ವ್ಯವಸ್ಥೆ ಹಾಗೂ ಧಾರ್ಮಿಕ ಮೂಢನಂಬಿಕೆ ಎರಡೂ ಜೊತೆ ಸೇರಿ 'ಸತಿ' ಪದ್ಧತಿಯನ್ನು ಹುಟ್ಟುಹಾಕಿವೆ. ಪಿತೃಪ್ರಧಾನ ವ್ಯವಸ್ಥೆ ಪುರುಷ ಕೇಂದ್ರಿತವಾದ ವ್ಯವಸ್ಥೆ. ಇದು ಸ್ತ್ರೀಯರ ವಿರುದ್ಧ ವಿಶಿಷ್ಟವಾದ ನಿರಂಕುಶವಾದ ಧೋರಣೆಯನ್ನು ಹೊಂದಿದೆ. ಇದು 'ಮಹಿಳೆ'ಯನ್ನು ಪುರುಷನ ದೃಷ್ಟಿಕೋನದಿಂದ ನೋಡುವುದಲ್ಲದೆ, ನಿರ್ಧಾರವನ್ನು ಈ ಹಿನ್ನೆಲೆಯಲ್ಲಿ ತೆಗೆದು ಕೊಳ್ಳುತ್ತದೆ. ಈ ದೃಷ್ಟಿಕೋನದಿಂದ ಸ್ತ್ರೀಗೆ ಪುರುಷನಿಂದ ಹೊರತಾದ ಅಸ್ತಿತ್ವವಿಲ್ಲ. ಪ್ರಾಣಿಗಳಿಗಿರುವ ಸ್ವಾತಂತ್ರ್ಯವೂ ಮಹಿಳೆಯರಿಗೆ ಇಲ್ಲ.

ಈ ಅಮಾನವೀಯ ಪದ್ಧತಿಯ ಕ್ರೂರತೆಯನ್ನು ಮುಚ್ಚಲು ಧಾರ್ಮಿಕ ಹೊದಿಕೆಯನ್ನು ಉಪಯೋಗಿಲಾಗುತ್ತಿದೆ. ಹಿಂದೂ ಧರ್ಮದ ಪಾಲಕರೆನಿಸಿಕೊಂಡವರು ಧಾರ್ಮಿಕ ನಂಬಿಕೆಯ ಆಸರೆಯಲ್ಲಿ ಇದನ್ನು ಬೆಂಬಲಿಸುತ್ತಿದ್ದಾರೆ. ಸತಿ ಪದ್ಧತಿಗೂ ಸನಾತನ ಧರ್ಮಕ್ಕೂ ನೇರವಾದ ಸಂಬಂಧವಿಲ್ಲ. ಆದರೆ ಇದು ಅರ್ಥ ಧರ್ಮಕ್ಕೆ ನೇರವಾಗಿ ಸಂಬಂಧಪಟ್ಟಿದೆ. ಚರಣ್ ಆತ್ಮಹತ್ಯೆ ಮಾಡಿಕೊಂಡ ಸ್ಥಳದಲ್ಲಿ ದೇವಸ್ಥಾನ ಕಟ್ಟುವುದರಿಂದ ಸಾಕಷ್ಟು ಹಣ ಸರಬರಾಜಾಗುವುದು ಧಾರ್ಮಿಕ ಆತ್ಮಹತ್ಯೆಯೇ ಸರಿ. ಭಾರತ ದೇಶಕ್ಕೆ ಹಳ್ಳಿಗಳಿರುವಂತೆ, ನಮ್ಮ ಸ್ತ್ರೀಯರು ಅವರ ಗಂಡಂದಿರಿಗೆ, ಸಂಪೂರ್ಣ ನಿರ್ಲಕ್ಷೆ, ಹಾಗೂ ಶೋಷಣೆಯಿಂದ ಕೂಡಿವೆ.

'ಸತಿಮಾತಾ' ದೇವಸ್ಥಾನವನ್ನು ಕಟ್ಟುವ ಹಿಂದೂ ವಿಚಾರಧಾರೆಯನ್ನು ನಾವು ಗಮನಿಸಬೇಕಾಗುತ್ತದೆ. ಸತಿ ಸ್ಥಳದಲ್ಲಿ ದೇವಸ್ಥಾನ ನಿರ್ಮಿಸಬೇಕೆನ್ನುವ ಜನ 35 ವರ್ಷಗಳ ಕಾಲ, ಚರಣ್‌ಗಾಗಲಿ, ಅವಳ ಗಂಡನಿಗಾಗಲೀ ಯಾವುದೇ ನೆರವನ್ನು ನೀಡಲಿಲ್ಲ. ನಮ್ಮ ದೇಶದ ಹಳ್ಳಿಗಳನ್ನು ವಿಧವೆಯರಿಗಿಂತ ಕೀಳಾಗಿ ನೋಡುತ್ತಿರುವುದರಿಂದ ಸಂಸ್ಕೃತಿಕ ಅವನತಿ ಕಂಡು ಬರುತ್ತಿದೆ.

●

ಮಾನಸದಲ್ಲಿ ಪ್ರಕಟವಾದ ಲೇಖನಗಳಿಗೆ ನಿಮ್ಮ ಅನಿಸಿಕೆ, ಪ್ರತಿಕ್ರಿಯೆಗಳನ್ನು ಬರೆದು ಕಳಿಸಿ. ಇವುಗಳನ್ನು ಓದುಗರ ವಿಭಾಗ ಕಾಲಂನಲ್ಲಿ ಪ್ರಕಟಿಸಲಾಗುವುದು.

*- ಸಂಪಾದಕ ಮಂಡಳಿ*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ**

*ಸಂ. ಮಂಡಳಿ*

REGD No. KRNA 324

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067